# ಸಿದ್ಧಗಂಗಾ

ಸಂಪುಟ–೨೦ ಸಂಚಿಕೆ- ೭ ಜುಲೈ, ೧೯೮೪

[ಏಪ್ರಿಲ್–ಮೇ ಸಂಚಿಕೆಯಿಂದ]

## ಶ್ರೀಸಿದ್ಧಗಂಗಾ ಮಹಿಮ್ನ: ಸ್ತೋತ್ರ

—ಆಸ್ಥಾನ ವಿದ್ವಾನ್ ಎಂ. ಜಿ. ನಂಜುಂಡಾರಾಧ್ಯ

ಸುಮನಸಾರ್ಚಿತ ಪಾದಪಂಕಜ
ಸುಮಶರಾಂತಕ ದೇವ ಭಾಕ್ತಿಕ
ಸುಮಗಳಿಂದರ್ಚಿಸುವ ಭಕುತರ ಪೊರೆಯೆ ತಿರೆಯೊಳಗೆ।
ಸುಮನದಿಂ ಮೆರೆ ಸಿದ್ಧಗಂಗಾ
ಶ್ರಮದೆ ನೆಲಸಿಹ ಯೋಗಿ ಪುಂಗವ
ವಿಮಲಮತಿ ಗುರು ಸಿದ್ಧಲಿಂಗನು ಪೊರೆಗೆ ಮೂಜಗವ॥೩॥

ಸಿದ್ಧಜನಸುಜ್ಞಾನ ದಾಯಿನಿ
ಶುದ್ಧಮಾನಸ ವಿಬುಧ ಪೋಷಿಣಿ
ಸಿದ್ಧಗೋಸಲ ಮೌನಿಹೃದಯಾಂಭೋಜ ಸಂಜನನಿ।
ಸಿದ್ಧವಂದಿತೆ ವಿಬುಧವಾಹಿನಿ
ಶುದ್ಧ ವಿದ್ಯಾರಸಿಕ ತೋಷಿಣಿ
ಸಿದ್ಧಗಂಗಾ ಮಾತೆ ರಕ್ಷಿಕೆ ಜಗವನನವರತ ॥೪॥

# ಈ ಸಂಚಿಕೆಯಲ್ಲಿ







# ಶ್ರೀವಾಣಿ

## ಹೆಣ್ಣು : ಅಂದು ಇಂದು

ಹೆಣ್ಣಿನ ಹಿರಿಮೆಗಳನ್ನು ಸಾರುವ ಅನೇಕ ಪ್ರಸಂಗಗಳು ಪುರಾಣದಲ್ಲಿವೆ. ಹರಿಶ್ಚಂದ್ರನ ಚರಿತ್ರೆಯಲ್ಲಿ ಕಾಣುವ ಚಂದ್ರಮತಿಯ ಪಾತ್ರ ಸ್ತ್ರೀತ್ವದ ಉಜ್ವಲತೆಗೆ ಉತ್ಕೃಷ್ಟ ಉದಾಹರಣೆ. ಗಂಡನು ಸತ್ಯದ ಅಗ್ನಿಪರೀಕ್ಷೆಗೆ ಒಳಗಾದಾಗ ಆಕೆ ಆತನಿಗೆ ಸ್ಫೂರ್ತಿ ಶಕ್ತಿಯಾಗಿ, ಸತ್ಪ್ರೇರಕಳಾಗಿ ಅವನಗುರಿಸಾಧನೆಗೆ ನೆರವಾಗಿ ಅನುಭವಿಸಿದ ಕಷ್ಟ ನಿಷ್ಠುರದ ಮೊತ್ತ ಅಪಾರ. ಅದರಿಂದ ಅವಳು ಅಮರಳಾಗಿದ್ದಾಳೆ. ಹೆಣ್ಣಿನ ಮಹತ್ವ ಬರೀ ಉಪನಿಷತ್ತು, ಪುರಾಣಗಳಲ್ಲಿ ಮಾತ್ರ ಇಲ್ಲ, ಇತಿಹಾಸದಲ್ಲಿಯೂ ಸಾಕಷ್ಟು ನಿದರ್ಶನಗಳು ನಮಗೆ ದೊರೆಯುತ್ತವೆ. ರಾಣಾಪ್ರತಾಪ ಸಿಂಹನ ಮಗಳ ಸ್ವಾತಂತ್ರ್ಯ, ಪ್ರೇಮ, ತ್ಯಾಗ ಬುದ್ಧಿ, ಕಷ್ಟಸಹಿಷ್ಣುತೆ, ದಿಟ್ಟತನಗಳು ಚರಿತ್ರಾರ್ಹವಾಗಿವೆ. ರಾಜ್ಯಭ್ರಷ್ಟನಾದ ತಂದೆ ಕಾಡುಮೇಡು ಅಲೆಯುತ್ತಾ, ಒಂದು ಹೊತ್ತಿನ ಊಟಕ್ಕೆ ಗತಿಯಿಲ್ಲದ ಪರಿಸ್ಥಿತಿಯಿದ್ದಾಗಲೂ, ಬೇಡಿಬಂದ ಸನ್ಯಾಸಿಗೆ ತನಗೆ ತಿನ್ನಲು ಉಳಿದಿದ್ದ ತುಂಡು ರೊಟ್ಟಿಯನ್ನೇ ನೀಡಲು ಮುಂದೆ ಬಂದ ಆ ಎಳೆಯ ವಯಸ್ಸಿನ ಹೆಣ್ಣು ಮಗಳ ತ್ಯಾಗ ಚಿಕ್ಕದಲ್ಲ. ಅಕಬರ ಬಾದಷಹನಿಗೆ ಪ್ರತಾಪನು ಶರಣಾಗತನಾದರೆ ಕಳೆದುಕೊಂಡ ರಾಜ್ಯಭೋಗ, ಸುಖಸಂಪತ್ತು ಎಲ್ಲವೂ ದೊರೆಯುವುದೆಂಬ ಮಾತನ್ನು ಸಂನ್ಯಾಸಿ ಹೇಳಿದಾಗ, ಆ ಹೆಣ್ಣು ಮಗಳು ತಂದೆಗೆ ಹೇಳಿದ್ದೇನು? ನಿನ್ನ ದೇಹದಲ್ಲಿ ತೊಟ್ಟು ರಕ್ತವಿರುವ ತನಕ ಬಾದಷಹನಿಗೆ ಶರಣಾಗಬೇಡ ನಾವು ಎಷ್ಟೇ ಕಷ್ಟಬರಲಿ ಸ್ವತಂತ್ರರಾಗಿರೋಣ. ಹೀಗೆ ಹೇಳಿದ ಆಕೆ ತಂದೆಯಿಂದ ವಚನವನ್ನು ಪಡೆದು ಪ್ರಾಣನೀಗುತ್ತಾಳೆ. ಸಂನ್ಯಾಸಿಯ ವೇಷದಲ್ಲಿದ್ದ ಬಾದಷಹನು ಆ ಹೆಣ್ಣು ಮಗಳ ಅಪೂರ್ವವಾದ ಸ್ವಾತಂತ್ರ್ಯ, ಪ್ರೇಮ, ದಿಟ್ಟತನಗಳನ್ನು ಕಂಡು ಇಂಥ ಅಪೂರ್ವವಾದ ಸ್ತ್ರೀರತ್ನ ಕಣ್ಮರೆಯಾಯಿತಲ್ಲಾ ! ಎಂದು ದುಃಖಿಸುತ್ತಾನೆ. ಚಿಕ್ಕವಯಸ್ಸಿನ ಆ ಹೆಣ್ಣು ಮಗು ಅಕಬರನ ಕಣ್ಣು ತೆರೆಸುತ್ತಾಳೆ. ಅಕಬರ ರಾಣಾಪ್ರತಾಪನಿಗೆ ರಾಜ್ಯವನ್ನು ಮರಳಿ ಕೊಟ್ಟ ಅವನು ಸ್ವತಂತ್ರ ರಾಜನೆಂದು ಒಪ್ಪಿಕೊಳ್ಳುತ್ತಾನೆ. ಲೋಕದ ಎಲ್ಲ ಮಹಾತ್ಮರ ಜೀವನದಲ್ಲಿ ಹೆಣ್ಣಿನ ಪ್ರಭಾವ ಮುದ್ರೆಯನ್ನು ಕಾಣಬಹುದು, ತಾಯಾಗಿ, ಪತ್ನಿಯಾಗಿ ಗಂಡನ ಮೇಲೆ ಸತ್ಪ್ರಭಾವವನ್ನು ಬೀರಿರುವುದನ್ನು ಕಾಣಬಹುದು. ಅವರ ಬಾಳು ಬೆಳಗಲು ತಮ್ಮ ತ್ಯಾಗ ಮತ್ತು ಸಹನೆಗಳಿಂದ ಶ್ರಮಿಸಿದ್ದಾರೆ.

"ಸಿದ್ಧಗಂಗಾ" ಮಾಸ ಪತ್ರಿಕೆ

ಶ್ರೀ ಸಿದ್ಧಗಂಗಾ ಮಠ-572104

ತುಮಕೂರು ಜಿಲ್ಲೆ.

ಪ್ರಧಾನ ಸಂಪಾದಕರು

ಪಂ॥ ಚನ್ನಪ್ಪ ಎರೇಸೀಮೆ

ಹೆಚ್. ವಿ. ವೀರಭದ್ರಯ್ಯ

* * *

ಸಹ ಸಂಪಾದಕರು

ಪಿ. ಎಸ್. ಚಂದ್ರಶೇಖರಯ್ಯ

ಬಸವರಾಜು

* * *

ಜಾಹೀರಾತು ವಿಭಾಗ

ಎಂ. ರೇಣುಕಾರಾಧ್ಯ

* * *

ಪ್ರಸಾರ ವಿಭಾಗ

ಆರ್. ಎಸ್. ಮಲ್ಲೇಶಪ್ಪ

* * *

ಪ್ರಕಾಶಕರು

ಹೆಚ್.ಬಿ. ಗಂಗಾಧರಯ್ಯ

ಹಳೆಯ ವಿದ್ಯಾರ್ಥಿ ಸಂಘದ ಪರವಾಗಿ

* * *

ಮುದ್ರಕರು

ಶ್ರೀ ಸಿದ್ಧಲಿಂಗೇಶ್ವರ ಸ್ವಾಮಿ

ಮುದ್ರಣಾಲಯ

* * *

ಪ್ರಕಟಣೆಯ ಸ್ಥಳ

ಶ್ರೀ ಸಿದ್ಧಗಂಗಾ ಕ್ಷೇತ್ರ

ಚಂದಾ ವಿವರ

ವಾರ್ಷಿಕ ಚಂದಾ 15-00 ರೂ

ಆಜೀವ ಸದಸ್ಯತ್ವ 201-00 ರೂ

1984 ನೇ ಜನವರಿಯಿಂದ


### ಲೇಖಕರಲ್ಲಿ ಮನವಿ

'ಸಿದ್ಧಗಂಗಾ' ನಾಡಿನ ಜನತೆಗೆ ಜ್ಞಾನ ದಾಸೋಹ ವಿತರಣೆಯ ಕೆಲಸದಲ್ಲಿ ತೊಡಗಿರುವ ಪ್ರಸಿದ್ಧ ಮಾಸಪತ್ರಿಕೆಯಾಗಿದೆ. ಈ ಉದ್ದೇಶ ಸಾಧನೆಗಾಗಿ ನಾಡಿನ ಗಣ್ಯ ಲೇಖಕರಿಂದ ಸಾಹಿತ್ಯ, ಸಂಸ್ಕೃತಿ, ಕಥೆ, ಕವನ, ಕಲೆ, ವಿಜ್ಞಾನ, ಶಿಕ್ಷಣ, ರಾಜನೀತಿ, ಧರ್ಮ, ದರ್ಶನ, ಇತಿಹಾಸ ವೈಚಾರಿಕ, ಚಿಂತನ, ನಗೆಬರೆಹ, ಹರಟೆ ಮುಂತಾದ ಲೇಖನಗಳನ್ನು ಸದಾ ಸ್ವಾಗತಿಸುತ್ತದೆ. ಲೇಖನಗಳು ಫುಲ್ ಸ್ಕೇಪ್ ಸೈಜಿನ ಕಾಗದದ ಒಂದೇ ಮಗ್ಗುಲಲ್ಲಿ ಸ್ಪಷ್ಟವಾಗಿ ಬರೆದಿರಬೇಕು. ಅಸ್ವೀಕೃತ ಲೇಖನಗಳನ್ನು ಪಡೆಯಲು ಸಾಕಷ್ಟು ಅಂಚೆಚೀಟಿಯನ್ನು ಲಗತ್ತಿಸಿರಬೇಕು. ಲೇಖನಗಳು ಆಕಸ್ಮಾತ್ ಕಳೆದು ಹೋದರೆ ಸಂಪಾದಕರು ಹೊಣೆಗಾರರಲ್ಲ. ಲೇಖನಗಳಲ್ಲಿ ಸೂಕ್ತ ಬದಲಾವಣೆ ಮಾಡಿಕೊಳ್ಳುವ ಅಧಿಕಾರ ಸಂಪಾದಕರಿಗಿದೆ. ಈ ಬಗ್ಗೆ ಪತ್ರವ್ಯವಹಾರಕ್ಕೆ ಅವಕಾಶವಿಲ್ಲ. ಅನುವಾದ, ರೂಪಾಂತರ ಲೇಖನಗಳಿಗೆ ಮೂಲ ಕೃತಿಕಾರರ ಅನುಮತಿ ಪಡೆದಿರಬೇಕು. ಸ್ವೀಕೃತ ಲೇಖನದ ಪ್ರಕಟಣೆಗೆ 'ಸಿದ್ಧಗಂಗಾ' ಆಗಿಂದಾಗ್ಗೆ ನಿಗದಿ ಪಡಿಸಿರುವ ಸಂಭಾವನೆಯನ್ನು ಕಳುಹಿಸಿಕೊಡಲಾಗುವುದು. ಸ್ಥಿರ ಶೀರ್ಷಿಕೆ ಪಡೆಯಲಿಚ್ಛಿಸುವ ಬರಹಗಾರರಿಗೆ ಆದ್ಯತೆ ಕೊಡಲಾಗುವುದು.

"ಸಂಪಾದಕರು"

'ಸಿದ್ಧಗಂಗಾ' ಕನ್ನಡ ಮಾಸ ಪತ್ರಿಕೆ

ಶ್ರೀ ಸಿದ್ಧಗಂಗಾ ಕ್ಷೇತ್ರ-572104

ತುಮಕೂರು ಜಿಲ್ಲೆ.

ಇವರಿಗೆ ಕಳಿಸಿಕೊಡಬೇಕಾಗಿ ಪ್ರಾರ್ಥನೆ.



# ಸಂಪಾದಕೀಯ

ಶಾಲಾ ಕಾಲೇಜುಗಳು ಆರಂಭವಾಗಿವೆ, ಕೆಲವು ಇನ್ನೂ ಆರಂಭವಾಗಬೇಕಾಗಿದೆ. ತಾಂತ್ರಿಕ ಮತ್ತು ವೈದಕೀಯ ಶಿಕ್ಷಣಕ್ಕೆ ಸೇರಬಯಸುವ ವಿದ್ಯಾರ್ಥಿಗಳಿಗೆ ಪ್ರವೇಶ ಪರೀಕ್ಷೆ ಇದೀಗ ತಾನೆ ಮುಗಿದಿದೆ; ಅದರ ಫಲಿತಾಂಶ ಬರಬೇಕಾಗಿದೆ. ಲಕ್ಷ ಲಕ್ಷ ಸಂಖ್ಯೆಯಲ್ಲಿ ವಿದ್ಯಾರ್ಥಿಗಳು ವಿವಿಧ ತರಗತಿಗಳಿಗೆ ಸೇರಿದ್ದಾರೆ; ಸೇರುವವರಿದ್ದಾರೆ. ಎಲ್ಲರ ಮುಂದೆ ಜೀವನದ ಪ್ರಶ್ನೆಯಿದೆ; ಭವಿಷ್ಯದ ಸುಂದರ ಕನಸಿದೆ. ಅದನ್ನು ಸಾಧಿಸುವುದಕ್ಕಾಗಿ ಹೋರಾಟವಾಗಿದೆ. ಒಪ್ಪಬೇಕಾದದ್ದೆ. ಆದರೆ ಇಂದು ಅವರು ಪಡೆಯುತ್ತಿರುವ ಶಿಕ್ಷಣಕ್ಕೂ, ವಾಸ್ತವ ಬದುಕಿಗೂ ನಡುವೆ ಕಂದರವಿರುವುದು ತಿಳಿವಿಗೆ ಬಾರದ ವಿಚಾರವಲ್ಲ. "ಹಿಂದಿನ ಕಾಲದಲ್ಲಿ ವಿದ್ಯಾಭ್ಯಾಸ ವೈಶಿಷ್ಟ್ಯಪೂರ್ಣವಾಗಿತ್ತು. ಇಂದು ವ್ಯಾವಹಾರಿಕವಾಗಿದೆ. ವಿದ್ಯಾರ್ಥಿಯಾದವನು ಶ್ರದ್ಧೆಯಿಂದ ಅಭ್ಯಾಸಮಾಡುವುದು, ಜ್ಞಾನಸಂಪಾದನೆ ಮಾಡುವುದು ಅಂದಿನ ಧ್ಯೇಯವಾಗಿತ್ತು. ಪರೀಕ್ಷೆಯಲ್ಲಿ ಪಾಸುಮಾಡುವುದಕ್ಕಾಗಿ ಓದುವುದು ಇಂದಾಗಿದೆ. ಅಲ್ಲದೆ ಪಠ್ಯ ಪುಸ್ತಕ ಅಭ್ಯಾಸಮಾಡುವ ವಿದ್ಯಾರ್ಥಿಗಳಿಂದು ಅಪರೂಪ. ಮಾರ್ಗದರ್ಶಿಕೆಗಳನ್ನು ಸಹಾಯಕಗಳನ್ನು ಓದುವವರೇ ಹೆಚ್ಚು; ಇನ್ನೂ ಒಂದು ವರ್ಗ ಪಾರ್ಥೇನಿಯಂನಂತೆ ಬೆಳೆಯುತ್ತಿದೆ, ಅದೆಂದರೆ ಕೇವಲ ಪ್ರಶ್ನೆ-ಉತ್ತರಗಳನ್ನು ಕಂಠಪಾಠ ಮಾಡುವವರು ಇವರನ್ನೂ ಮೀರಿಸಿದವರಿದ್ದಾರೆ. ಪರೀಕ್ಷೆಯಲ್ಲಿ 'ವಿಶ್ವತೋಚಕ್ಷು' ವಾದ ಭಗವಂತನ ಕಣ್ಣು ತಪ್ಪಿಸಿ 'ಕಾಪಿ' ಯಜ್ಞ ಮಾಡುವ ಋತ್ವಿಜರು.

ವಿದ್ಯೆಯ ಮೂಲ ಉದ್ದೇಶವೇ ಹಾಳಾಗಿದೆ. ಮೌಲ್ಯರಾಹಿತ್ಯ, ಭಾವರಾಹಿತ್ಯ ಶಿಕ್ಷಣ ಸಾಗಿದೆ". (ಶ್ರೀ ಶ್ರೀಗಳವರು – ಪ್ರಾರ್ಥನಾ ಸಭೆ– 1?-7-84ರ ಸಂಜೆ)

ಶಿಕ್ಷಣ ಇಂದು ಭೋಗಮುಖವಾಗಿ ನಡೆದಿದೆ. ಸೌಜನ್ಯ ಸೌಹಾರ್ದ ಭಾವಗಳಿಂದ ಬಯಲಾಗಿವೆ ಕಲಿಯುತ್ತಿರುವವರಲ್ಲಿ ವಿನಯ ಕಾಣದಾಗಿದೆ. ಕಲಿಕೆ ಕೃತಕವಾಗುತ್ತಿದೆ.

ಮಾನವೀಯ ಬಾಂಧವ್ಯಗಳನ್ನು ಸುಮಧುರವಾಗಿ ಬೆಳೆಸುತ್ತಿಲ್ಲ; ಬೆಸೆಯುತ್ತಿಲ್ಲ. ಮಾನವತ್ವದ ಕಲ್ಪನೆಯನ್ನು ಶಿಕ್ಷಣ ತಂದುಕೊಡಬೇಕು; ಇಲ್ಲಿ ಅದಾಗುತ್ತಿಲ್ಲ. ಅಂದಮೇಲೆ ಕೋಟಿ ಕೋಟಿರೂಗಳನ್ನು ಖರ್ಚುಮಾಡಿ ಪ್ರಯೋಜನವೇನು? ವಿಚಾರವಂತರ ಪ್ರಶ್ನೆ ಎದುರಾಗುತ್ತದೆ ಪರಿಹಾರ ಹೇಗೆ? ಯಾರು ಕೊಡಬೇಕು? ಯಾರ ಜವಾಬ್ದಾರಿ ಇದೆ ಇಲ್ಲಿ? ಎಲ್ಲರ ಆತ್ಮನಿರೀಕ್ಷಣೆಯೊಂದೆ, ಅದರ ಬೆಳಕಿನಲ್ಲಿ

ಕಾರ್ಯೋನ್ಮುಖರಾಗುವುದೊಂದೇ ದಾರಿ; ಪರಿಹಾರ. ಬೇವು ಬಿತ್ತಿ ಮಾವು ಬಯಸುವುದು ಎಷ್ಟು ಸೂಕ್ತ. ಯೋಚಿಸಬೇಕು? ಯಾರು? ಎಲ್ಲರೂ ವಿದ್ಯಾರ್ಥಿ, ಅಧ್ಯಾಪಕ, ಪೋಷಕ, ಸಮಾಜ, ಸರ್ಕಾರ. ಎಲ್ಲರೂ; ದೊಡ್ಡವರ ಮಾತು-ಕೃತಿಗಳಲ್ಲಿರುವ ಅಂತರ ಹೋಗಬೇಕು. ಹೇಳುವುದೊಂದು ಮಾಡುವುದೊಂದು ನಿಲ್ಲಬೇಕು. ಅಧ್ಯಾಪಕ ತಾನು ಒಪ್ಪಿಕೊಂಡ. ಅಪ್ಪಿಕೊಂಡ ವೃತ್ತಿಗೆ ನಿಷ್ಠನಾಗಬೇಕು, ಉಂಡ ಉಪ್ಪಿನ ಋಣ ತೀರಿಸಬೇಕು. (ಕೆಲವು ನಿಷ್ಠಾವಂತ ಆದರ್ಶ ಅಧ್ಯಾಪಕರು ಇಂದೂ ಇದ್ದಾರೆ ಅವರದಾರಿ ನಮ್ಮದಾಗಬೇಕು) ವಿದ್ಯಾರ್ಥಿ ಚಿಲ್ಲರೆ ಹವ್ಯಾಸಗಳಲ್ಲಿ ಕಾಲಹರಣ ಮಾಡುವುದನ್ನು ಬಿಟ್ಟು ಶಿಕ್ಷಣ ತಪಸ್ಸಿನಲ್ಲಿ ಮಗ್ನನಾಗುವುದು ರಾಷ್ಟ್ರಕ್ಕೆ ತಾನು ಮಾಡುವ ಮಹೋಪಕಾರ. ಪೋಷಕ, ಜನಾಂಗವನ್ನು ರೂಪಿಸುವ ಅಧ್ಯಾಪಕನನ್ನು ಬಂಧುವೆಂದು ಭಾವಿಸುವಲ್ಲಿ ಕ್ಷೇಮವಿದೆ; ತನ್ನ ಕಲ್ಯಾಣವಿದೆ. ನಾಯಕರು ವಿದ್ಯಾರ್ಥಿಗಳನ್ನು ತಮ್ಮ ಸ್ವಹಿತಕ್ಕಾಗಿ ಬಳಸುವುದನ್ನು ನಿಲ್ಲಿಸಿದರೆ ದೇಶಕ್ಕೆ ಅವರು ಸಲ್ಲಿಸುವ ಅಮೂಲ್ಯ ಕಾಣಿಕೆಯಾದೀತು. ಶಿಕ್ಷಣ ಇಂದು ವ್ಯಾಪಕವಾಗಿದೆ ಎಂಬ ಅಪಲಾಪ ನಿಲ್ಲಬೇಕಾದರೆ ಸಕ್ರಿಯ ಪ್ರಾಮಾಣಿಕ ಪ್ರಯತ್ನ ಒಂದುದಿಕ್ಕಿನಲ್ಲಿ ಮುನ್ನಡೆಯಬೇಕು–ಆಗ ರಾಷ್ಟ್ರದ ಭವಿಷ್ಯ ಭದ್ರವಾದೀತು. ಒಂದು ದೇಶ ಯುದ್ಧದಿಂದ ಹಾಳಾದರೆ ಮತ್ತೆ ಆ ದೇಶವನ್ನು ಕಟ್ಟಬಹುದು. ಆದರೆ ಒಂದು ದೇಶ ಸೂಕ್ತ ವಿದ್ಯೆಯಿಲ್ಲದೆ ಹಾಳಾದರೆ ಅದು ಎಂದೆಂದಿಗೂ ಎದ್ದು ನಿಲ್ಲಲಾರದು.





# ★ ನವನೀತ ★

(ಸಂಸ್ಕೃತ ಶ್ಲೋಕಗಳ ಭಾವಾನುವಾದ)

ಕ್ಷಮಯಾ ರೋಚತೇ ಲಕ್ಷ್ಮೀರ್ಬ್ರಾಹ್ಮೀ ಸೌರೀ ಯಥಾ ಪ್ರಭಾ।
ಕ್ಷಮಿಣಾಮಾಶು ಭಗವಾಂಸ್ತುಷ್ಯತೇ ಹರಿರೀಶ್ವರಃ॥

— ಭಾಗವತ

ಕ್ಷಮೆಯಿಂದ ಮನುಷ್ಯನ ಮುಖಕಾಂತಿಯು ಸೂರ್ಯನ ಪ್ರಭೆಯಂತೆ ಬೆಳಗುತ್ತದೆ. ಸರ್ವೇಶ್ವರನಾದ ಪರಮಾತ್ಮನು ಕ್ಷಮೆಯುಳ್ಳವರಲ್ಲಿ ಬಹಳ ಬೇಗ ಸಂತೋಷಪಡುತ್ತಾನೆ.-

ಮಾಧುರ್ಯ ಮಕ್ಷರವ್ಯಕ್ತಿಃ ಪದಚ್ಛೇದಸ್ತು ಸುಸ್ವರಃ।
ಧೈರ್ಯಂ ಲಯಸಮರ್ಥಂಚ ಷಡೇತೇ ಪಾಠಕಾಗುಣಾಃ॥

— ಪಾಣಿನೀಯ ಶಿಕ್ಷಾ

ಇಂಪು, ಅಕ್ಷರಸ್ಫುಟತೆ, ಪದಚ್ಛೇದ, ಸರಿಯಾದಸ್ವರ, ಧೈರ್ಯ, ಲಯಯುಕ್ತವಾಗಿ ಹೇಳುವುದು–ಇವು ಆರು ಪಾಠಕನ ಒಳ್ಳೆಯ ಗುಣಗಳು.

ಯೇ ಯೇ ಗುಣಿನೋ ಯೇ ಯೇ ತ್ಯಾಗಿನೋ ಯೇ ವಿದಗ್ಧ-
ಜನಾಃ। ದಾರಿದ್ರ್ಯರೇ ವಿಚಕ್ಷಣ ತೇಷಾಂ ತ್ವಂ ಸಾನುರಾಗಮಸಿ॥

— ಹಾಲನ ಸಪ್ತಶತೀ

ಎಲೈ ಬಡತನ! ನೀನು ಬಹಳ ಚತುರ. ಒಳ್ಳೆಯ ಗುಣವುಳ್ಳವರನ್ನೂ, ತ್ಯಾಗಿಗಳನ್ನೂ, ಪಂಡಿತರನ್ನೂ ಆರಿಸಿಕೊಂಡು ಅವರಲ್ಲಿ ಪ್ರೀತಿಯನ್ನು ತೋರಿಸುತ್ತೀಯೆ!

# ಚಿಂತನ-೨

—ವಿದ್ವಾನ್ ಎಸ್. ಷಡಕ್ಷರಿ, ಬಿ.ಎಸ್ಸಿ.,ಎಂ.ಎ.,ಬಿ.ಇಡಿ.

ಇಂದಿನ ಚಿಂತನದ ವಸ್ತು ನಮ್ಮ ಸಮಾಜದ ಸಮಸ್ಯೆಯನ್ನು ಕುರಿತದ್ದು. ಈ ಜಗತ್ತಿನಲ್ಲಿ ಸಮಸ್ಯೆಯಿಲ್ಲದ ದೇಶವಿಲ್ಲ, ಸಮಾಜವಿಲ್ಲ, ಅಂದಮೇಲೆ ನಮ್ಮ ಪಾಲಿನವೂ ಸಾಕಷ್ಟಿರಬೇಕಲ್ಲವೆ? ಇವತ್ತಿನ ಸಾಮಾಜಿಕ ಜೀವನ ಒಂದು ಗೊತ್ತುಗುರಿಯಿಲ್ಲದೆ ಸಾಗುತ್ತಿದೆ. ಇವತ್ತಿನ ಲೋಕದಲ್ಲಿ ಹತ್ತಾರು ಹೊಸ ಹೊಸ ಶಾಸ್ತ್ರಗಳು ಹೊಸ ಹೊಸ ಮತಗಳು ತಲೆಯೆತ್ತಿ, ಹತ್ತಾರು ದಿಕ್ಕುಗಳಿಗೆ ನಮ್ಮ ಬುದ್ಧಿ ಮನಸ್ಸುಗಳನ್ನು ಸೆಳೆದಾಡಿ ಹಳೆಯ ನಿಶ್ಚಯವನ್ನು ಹೋಗಲಾಡಿಸಿ ಹೊಸ ಸಂದೇಹ ಸಂಕ್ಷೋಭೆಗಳನ್ನು ಹರಡಿವೆ. ಈ ಹೊಸ ವಿಜ್ಞಾನ ವಿಕ್ಷಿಪ್ತವಾದ ವಾತಾವರಣದಲ್ಲಿ ನಾವು ನಮ್ಮ ಬದುಕಿನ ಸಮಸ್ಯೆಗಳನ್ನು ವಿಮರ್ಶೆ ಮಾಡಿ ಜೀವಿಸಬೇಕಾಗಿದೆ. ಮನಸ್ಸಿನ ಭಾವನೆಗಳಲ್ಲಿ ಕೆಲವು ಬದಲಾವಣೆಯಾಗಬೇಕು, ಅದಕ್ಕಾಗಿ ಕೆಲವು ಚಿಂತನ ಮಂಥನ ಅನಿವಾರ್ಯ.

ಕೆಲವು ಮಹಾ ತತ್ವಗಳನ್ನು ಅಪಾರ್ಥಮಾಡಿಕೊಂಡು ದಡ್ಡರಾಗುತ್ತಿದ್ದೇವೆ. ದೈಹಿಕ ದುರ್ಬಲತೆ ಮತ್ತು ಅಂಜುಬುರುಕತನವನ್ನು ಹುಟ್ಟುಗುಣ ಮಾಡಿಕೊಳ್ಳುತ್ತಿದ್ದೇವೆ. ಇದಕ್ಕೆ ಅಹಿಂಸೆಯ ಅಂಗಿಯನ್ನು ತೊಡಿಸಿರುತ್ತೇವೆ, 'ಬುದ್ಧದೇವ ಹುಚ್ಚಿದ್ದ ಗೂಳಿಯನ್ನು ಕೊಂಬು ಹಿಡಿದು ನಿಲ್ಲಿಸಿದ! ಅಂಗುಲಿ ಮಾಲಿನಂಥ ರಾಕ್ಷಸನ ಎದುರಿಗೆ ಎದೆಯೊಡ್ಡಿ ನಿಂತ. ಗಾಂಧೀಜಿಯವರು 1923ರ ಮಾಪಿಳ್ಳ ದಂಗೆಯ ಕಾಲದಲ್ಲಿ ಆತ್ಮರಕ್ಷಣೆಗಾಗಿ ಇತರರನ್ನು ಕೊಲ್ಲುವ-ಸಾಯುವ ಕಲೆಯನ್ನು ಅಭ್ಯಸಿಸಬೇಕೆಂದು ಕರೆಯುತ್ತಿದ್ದರು. ಇದು ಹಿಂಸೆಯಲ್ಲ ಅಹಿಂಸೆ ಎಂದೇ ಘೋಷಿಸಿದ್ದರು. ಇದಕ್ಕಾಗಿ ಇಂದಿನ ಸಮಾಜಕ್ಕೆ ಒಂದು ಸ್ವತಂತ್ರ ವಿವೇಕ ಬೇಕು. ನೈಜ ಸಾಹಸ ಬೇಕು.

ಆತ್ಮಗೌರವ, ಸ್ವಪ್ರತಿಷ್ಠೆ, ಸ್ವಜಾತಿಗಳ ಹೆಸರಿನಲ್ಲಿ ಆಗುತ್ತಿರುವ ಅನಾಹುತಗಳು ಸಮಾಜದಲ್ಲಿ ತೊಲಗಬೇಕು. ಇಬ್ಬರು ಹಿಂದುಗಳು ಒಂದೆಡೆ ಸೇರಿ ಒಂದು ಕೆಲಸ ಸಾಧಿಸಲಾರರು! ವಿಧೇಯತೆ ಸಹಕಾರ ಮನೋಭಾವಗಳು ಕೇವಲ ಪುಸ್ತಕದ ಬದನೇಕಾಯಿ! ಅಸೂಯೆ ನಮ್ಮ ಜನ್ಮಕ್ಕೆ ಅಂಟಿಬಂದ ಗುಣ. ನಮ್ಮ ಅವನತಿಗೆ ಈ ಅಸೂಯೆ ಅನೈಕ್ಯಗಳು ಬಹುಷಃ ಮುಖ್ಯಕಾರಣವೆಂದರೂ ತಪ್ಪಾಗಲಾರದು. ಚರಿತ್ರೆಯ ಎಚ್ಚರಿಕೆಯನ್ನಾಗಲಿ, ಪಾಠವನ್ನಾಗಲಿ ನಾವಿನ್ನು ಕಲಿತೇ ಇಲ್ಲ. ಅಹಮ್ಮನ್ನು ತಗ್ಗಿಸಿ, ಅಸೂಯೆಯನ್ನು ಬದಿಗಿಟ್ಟು, ಯೋಗ್ಯ ನಾಯಕರ ಕೈಕೆಳಗೆ ವಿಧೇಯತೆ

(44ನೇ ಪುಟ ನೋಡಿ)



ಮುಂದುವರಿದ ಲೇಖನ

# ಬಸವಣ್ಣನವರು-೫

—ಡಾ|| ಅ. ನ. ಕೃಷ್ಣರಾಯರು

**ಸಾಧನಯೋಗ**

ಅಧ್ಯಾತ್ಮ, ಪ್ರಾಪಂಚಿಕ ಎರಡು ಜಗತ್ತುಗಳಲ್ಲಿಯೂ ಜೀವ, ದೇವರ ಸಂಬಂಧ ನಿಕಟವಾಗಿರುತ್ತದೆ. ಪ್ರಾಪಂಚಿಕ ರಂಗದಲ್ಲಿ ಅದು ಮೇಳಗೊಂಡಾಗ ದೇವ ಜೀವನಾಗುತ್ತಾನೆ. ಕ್ಷುಲ್ಲಕವಾದ ಆಶಾಸಂತೃಪ್ತಿಯಲ್ಲಿ ಅವನ ಮಿತ ಆಯುಷ್ಯ ವೆಚ್ಚವಾಗಿ ಹೋಗುತ್ತದೆ. ಸಣ್ಣ ಪುಟ್ಟ ಸಂಪಾದನೆಯಲ್ಲಿ ಅವನಿಗೆ ಅತುಲ ಆನಂದ ದೊರೆಯುತ್ತದೆ. ಗಾಜನ್ನು ರತ್ನವೆಂದು ಭಾವಿಸುತ್ತಾನೆ ಜೀವ ದೇವತ್ವದ ಕಡೆ ಹಾರಿದಾಗ ಅವನು ಪರೆಬಿಟ್ಟ ಹಾವಿನಂತೆ ಹೊಸ ಜನ್ಮವನ್ನೇ ತಳೆಯಬೇಕಾಗುತ್ತದೆ. ಇಲ್ಲಿನ ಪುರುಷಾರ್ಥಗಳನ್ನು ಮರೆತು ಅಲ್ಲಿನ ಪುರುಷಾರ್ಥಗಳನ್ನು ಆಚರಣೆಗೆ ತಂದುಕೊಳ್ಳಬೇಕಾಗುತ್ತದೆ. ಇಲ್ಲಿನ ಸುಖ ಅವನಿಗೆ ದುಃಖಹೇತುವಾಗುತ್ತದೆ. ಇಲ್ಲಿ ಅವನು ನಂಬಿದ್ದ ನಂಬಿಕೆಗಳು, ಮೆಚ್ಚಿದ್ದ ತತ್ವಗಳು, ಅನುಸರಿಸುತ್ತಿದ್ದ ಮಾರ್ಗಗಳು ಸತ್ಯಮಾರ್ಗದ ವಿಪರ್ಯಾಸಗಳೆಂಬ ಭಾವನೆಯುಂಟಾಗುತ್ತದೆ.

ದೇವತ್ವದ ಕಡೆ ಹಾಯುವ ಜೀವ ಹಲವು ಮಾರ್ಗಗಳನ್ನನುಸರಿಸುತ್ತಾನೆ. ಪಾರ್ಥಿವ ದೇಹವನ್ನು ಅಪಾರ್ಥಿವ ಮಾಡಿ ವಜ್ರದೇಹಿಯಾಗಲು ಹವಣಿಸುತ್ತಾನೆ. ಜ್ಞಾನದ ಬುಡಬೇರನ್ನುಸಂಶೋಧಿಸಿ ಅದರ ಜಾಡಿನಲ್ಲಿ ತನ್ನ ನೆಲೆಯನ್ನರಿಯಲು ಪ್ರಯತ್ನಿಸುತ್ತಾನೆ. ತನ್ನನ್ನು ಕಿರಿದುಮಾಡಿಕೊಂಡು ಹಿರಿದರ ಬಳಿಗೆ ಧಾವಿಸುತ್ತಾನೆ. ಈ ಒಂದೊಂದು ಮಾರ್ಗವೂ ಸಾಧಕನನ್ನು ಸಂದೇಹಗ್ರಸ್ತನನ್ನಾಗಿ ಮಾಡುತ್ತದೆ. ಸಾಧಕನನ್ನು ಮರುಳುಗಾಡಿನ ಯಾತ್ರಿಕನನ್ನಾಗಿಮಾಡಿ ಅವನು ಹೋದಷ್ಟು ದೂರವೂ ಮರುಳು ರಾಶಿಯನ್ನೇ ಕಣ್ಣಿಗೆ ತೂರುತ್ತ ಹೋಗುತ್ತದೆ. ಹರಿಹರ ಕವಿ ಹೇಳಿದಂತೆ ಬಸವಣ್ಣನವರು ತಮ್ಮದೇ ಆದ ಒಂದು ಋಜುಮಾರ್ಗವನ್ನನುಸರಿಸಿದರು. ಬೇರೆ ಮಾರ್ಗಗಳನ್ನು ಅವರು ನಿರಾಕರಿಸಲಿಲ್ಲ. ಆದರವುಗಳಿಗೇ ತೆಕ್ಕೆ ಬಿದ್ದು ತಾವೂ ಬಯಲುಭ್ರಾಂತಿಗೊಳಗಾಗಲಿಲ್ಲ. ಬಸವಣ್ಣನ ಮಾರ್ಗ ಮಾರ್ಗ, ರೀತಿ ರೀತಿ ಎನ್ನುವ ಬಗೆಯಲ್ಲಿ ಸಮಷ್ಟಿಯೋಗವೊಂದನ್ನು ಕಂಡುಕೊಂಡರು.

ಅವರ ಮನ ಕವಿಮನ, ಚಿತ್ತ ಕಲಾವಿದನ ಚಿತ್ತ. ರಸಋಷಿಗಳಾದ ಬಸವಣ್ಣನವರ ಪ್ರವೃತ್ತಿ ಎಲ್ಲ ಮಾರ್ಗಗಳ ಸಾರವನ್ನೂ ಹೀರಿಕೊಂಡಿತು; ಸಮಸ್ತ ಸಾಧನಪುಷ್ಪಸಾರ

ವನ್ನು ಅಳವಡಿಸಿ, ತಮ್ಮ ಜೀವಕ್ಕೆ ಒಪ್ಪುವ ಮಧುವನ್ನು ಕೂಡಿಸಿಕೊಂಡಿತು. ಬಸವಣ್ಣನವರು ಭಕ್ತರೂ ಹೌದು, ಜ್ಞಾನಿಗಳೂ ಹೌದು, ಕರ್ಮ ಯೋಗಿಗಳೂ ಹೌದು. ಆದರೆ ಭಕ್ತಿ, ಜ್ಞಾನ, ಶಾಖೋಪಶಾಖೆಗಳಿಗೆ ತೊನೆದಾಡಿದರೆ ಪ್ರಯೋಜನವಾದೀತೇ ? ಎಂಬ ವಿಚಾರ ಅವರಲ್ಲಿ ಮೂಡಿತು.

ಎಲ್ಲಕ್ಕೂ ಮೊದಲು ಮನೋಭೂಮಿಕೆ ಸಿದ್ಧವಾಗಬೇಕು. ಮನಸ್ಸಿನ ಮೇಲೆ ತೆರೆತೆರೆಯಾಗಿ ಕೂಡಿದ್ದ ಕಪ್ಪು ಮೋಡಗಳು ಜಾರಬೇಕು. ಜ್ಞಾನ ಸೂರ್ಯನನ್ನು ಮುಚ್ಚಿದ್ದ ಸುವರ್ಣ ಪಾತ್ರೆಯನ್ನು ಮೊದಲು ಹೊರಗೆ ತೆಗೆಯಬೇಕು. ಮನುಷ್ಯ ಪ್ರಗತಿಯೆಂದುಕೊಂಡೋ, ಸಂಸ್ಕೃತಿ ಎಂದುಕೊಂಡೋ, ನಾಗರೀಕತೆ ಎಂದುಕೊಂಡೋ, ಸನಾತನ ಆಚಾರವೆಂದುಕೊಂಡೋ, ದಿನದಿನವೂ ಹೊಸ ಹೊಸ ಚಿನ್ನದ ಶೃಂಖಲೆಗಳನ್ನು ತಂದು ತನ್ನನ್ನು ತಾನು ಬಂಧಿಸಿಕೊಳ್ಳುತ್ತಲೇ ಇರುತ್ತಾನೆ. ಸಾಧಕನ ಕೆಲಸ ಅವುಗಳನ್ನು ತೆಗೆದೊಗೆಯುವುದು. ಮನುಷ್ಯ ಹೇಗೆ ವಸ್ತ್ರರಹಿತನಾಗಿ, ಕರ್ಮನಿರ್ಲೇಪನಾಗಿ, ಪರಿಶುದ್ಧನಾಗಿ, ನಿಸರ್ಗದ ಶಿಶುವಾಗಿ ಹುಟ್ಟಿರುತ್ತಾನೆಯೋ ಆ ದೆಸೆಗೆ ಅವನನ್ನು ಒಯ್ಯುವುದು.

ಬಸವಣ್ಣನವರು ತಮ್ಮ ಸಾಧನಯೋಗದಲ್ಲಿ ಇಟ್ಟ ಮೊತ್ತಮೊದಲನೆಯ ಹೆಜ್ಜೆಯೆಂದರೆ ಈ ಶೃಂಖಲಾವಿವರ್ಜನ. ಸೋಹಂಭಾವ ಬರುವುದಕ್ಕೆ ಅಹಂಭಾವ ತೊಲಗಬೇಕು. ಜಾತಿಮದ, ಅನ್ನಮದ, ಅರ್ಥಮದಗಳು ತೊಲಗಬೇಕು. ಬಸವಣ್ಣನವರು ಉತ್ತಮಕುಲದಲ್ಲಿ ಹುಟ್ಟಿದರು. ಉತ್ತಮ ಶಿಕ್ಷಣಲಾಭವೂ ಅವರಿಗೆ ದೊರೆತಿತ್ತು. ಪರಂಪರಾಗತವಾಗಿ ರಕ್ತದೊಡನೆ ಕೂಡಿ ಬಂದಿದ್ದ ಕುಲ ಜಾತಿಗಳ ಹೆಮ್ಮೆ ಅವರನ್ನು ಕಾಡುತ್ತಿತ್ತು.

"ಉತ್ತಮ ಕುಲದಲ್ಲಿ ಹುಟ್ಟಿದೆನೆಂಬ ಕಷ್ಟತನದ ಹೊರೆಯ ಹೊರಿಸದಿರಯ್ಯ."
"ಸೆಟ್ಟಿ ಎಂಬೆನೆ ಸಿರಿಯಾಳನ ? ಮಡಿವಾಳನೆಂಬೆನೆ ಮಾಚಯ್ಯನ ?
ಡೋಹರನೆಂಬೆನೆ ಕಕ್ಕಯ್ಯನ ? ಮಾದಾರನೆಂಬೆನೆ ಚನ್ನಯ್ಯನ ?
ಆನು ಹಾರವನೆಂದಡೆ, ಕೂಡಲಸಂಗಯ್ಯ ನಗುವನಯ್ಯ."
"ಮೇಲಾಗಲೊಲ್ಲೆನು, ಕೀಳಾಗಲೊಲ್ಲದೆ,
ಕೀಳಿಂಗಲ್ಲದೆ ಹಯನು ನೆರೆವುದೇ ?
ಮೇಲಾಗಿ ನರಕದಲೋಲಾಗಲಾರೆನು
ನಿಮ್ಮ ಶರಣರ ಪಾದಕ್ಕೆ ಕೀಳಾಗಿರಿಸು ಮಹಾದಾನಿ
ಕೂಡಲಸಂಗಮದೇವಾ."

ಈ ತತ್ವವನ್ನು ಆಚರಣೆಗೆ ತರಲು ತಮ್ಮ ಕುಲಜಾತಿಗಳನ್ನು ಮರೆತು ಎಲ್ಲ ಕುಲ ಮತಸ್ಥರಲ್ಲಿಯೂ ಸಮಾನ ಭಾವದಿಂದ ವರ್ತಿಸತೊಡಗಿದರು. ತಮ್ಮಲ್ಲಿ



ಮೂಡಿದ್ದ ಸಿರಿಮದ ಹೋಗಬೇಕಾದರೆ ಬಡತನವೇ ದಾರಿಯೆಂದು ದೃಢವಾಗಿ ನಂಬಿದರು. ಸಾಮಾನ್ಯ ದುಡಿಮೆಕಾರರಂತೆ ಬಾಳನ್ನು ದೂಡತೊಡಗಿದರು.

"ಹಾವ ತಿಂದವರ ನುಡಿಸಬಹುದು; ಗರ ಹೊಡೆದವರ ನುಡಿಸಬಹುದು
ಸಿರಿಗರ ಹೊಡೆದವರ ನುಡಿಸಲು ಬಾರದು.
ಬಡತನವೆಂಬ ಮಂತ್ರವಾದಿ ಹೋಗಲು ಒಡನೆ ನುಡಿವರಯ್ಯಾ
ಕೂಡಲಸಂಗಮದೇವಾ".

"ಕಾಂಚನವೆಂಬ ನಾಯನೆಚ್ಚಿ ನಿಮ್ಮ ನಾನು ಮರೆತನಯ್ಯಾ
ಕಾಂಚನಕ್ಕೆ ವೇಳೆಯಿಲ್ಲದೆ ಲಿಂಗಕ್ಕೆ ವೇಳೆಯಿಲ್ಲ.
ಹಡಕಿಗೆ ಮೆಚ್ಚಿದ ಸೊಣಗನು ಅಮೃತದ ರುಚಿಯ ಬಲ್ಲುದೇ
ಕೂಡಲಸಂಗಮದೇವಾ."

ಬಸವಣ್ಣನವರ ವಿನಯಪ್ರವೃತ್ತಿ ಉನ್ನತ ಮಟ್ಟಕ್ಕೇರುತ್ತದೆ. ತಮ್ಮ ಸರ್ವತೋಮುಖ ಹಿರಿಮೆಯನ್ನು ಅವರು ತೊಡೆದು ಹಾಕಿ,

"ಎನಗಿಂತ ಕಿರಿಯರಿಲ್ಲ
ಶಿವಭಕ್ತರಿಗಿಂತ ಹಿರಿಯರಿಲ್ಲ,
ನಿಮ್ಮ ಪಾದಸಾಕ್ಷಿ, ಎನ್ನ ಮನಸಾಕ್ಷಿ,
ಕೂಡಲಸಂಗಮದೇವಾ, ಎನಗಿದೇ ದಿಬ್ಯ."

ಜನತೆಯ ಮೇಲೆ ಈ ಸಾಮ್ಯವಾದ ಯಾವ ಪರಿಣಾಮವನ್ನುಂಟುಮಾಡಿರಬಹುದೆಂಬುದು ಊಹಿಸಲಶಕ್ಯವಲ್ಲ. ಪರಮದಯಾಘನನಾದ ಈ ನಿರಾಡಂಬರ ಮೂರ್ತಿಯನ್ನು ಈಶ್ವರನ ಅವತಾರವೆಂದು ಜನ ಹೊಗಳಲು ಮೊದಲಿಟ್ಟರು. ಹೊಗಳಿಕೆಗೆ ತಲೆದೂಗಿ ತೆಗಳಿಕೆಗೆ ಕಹಿ ಮೋರೆ ಮಾಡುವ ಕಾಲ ಬಸವಣ್ಣನವರ ಜೀವನದಲ್ಲಿ ಮುಗಿದಿತ್ತು.

"ಎನ್ನಲ್ಲಿ ಭಕ್ತಿ ಸಾಸವೆಯ ಷಡ್ಭಾಗದಿನಿತಿಲ್ಲ. ಎನ್ನ ಭಕ್ತನೆಂಬರು,
ಎನ್ನ ಸಮಯಾಚಾರಿ ಎಂಬರು,
ನಾನೇನ ಪಾಪವ ಮಾಡಿದೆನೋ ?
ಬೆಳೆಯದ ಮುನ್ನವೇ ಕೊಯ್ವರೇ ಹೇಳಾ ?
ಇರಿಯದ ವೀರ ಇಲ್ಲದ ಸೊಬಗುವ ಎಲ್ಲ ಒಡೆಯರು ಏರಿಸಿ ನುಡಿವರು.
ಎನಗಿದು ವಿಧಿಯೇ ಕೂಡಲಸಂಗಮದೇವಾ."

"ಎನ್ನ ವರೊಲಿದು ಹೊನ್ನ ಶೂಲದಲಿಕ್ಕಿದರೆನ್ನ ಹೊಗಳಿ ಹೊಗಳಿ
ಎನ್ನ ಹೊಗಳತೆ ಎನ್ನ ಮೈಗೊಂಡಿತ್ತಲ್ಲಾ,
ಅಯ್ಯೊ, ನಿಮ್ಮ ಮನ್ನಣೆಯೇ ಮಸದಲಗಾಗಿ ತಾಗಿತ್ತಯ್ಯಾ
ಕೂಡಲಸಂಗಮದೇವಾ, ನೀನೆನಗೊಳ್ಳಿದನಾದರೆ,
ಎನ್ನ ಹೊಗಳತೆಗಡ್ಡ ಬಾರಾ ಧರ್ಮಿ."

"ಎನ್ನವರೆನಗೊಲಿದು ಹೊನ್ನ ಶೂಲದಲಿಕ್ಕಿದರಯ್ಯಾ
ಅಹಂಕಾರ ಪೂರಾಯ ಗಾಯದಲ್ಲಿ ಆನೆಂತು ಬದುಕುವೆ ಎಂತು ಜೀವಿಸುವೆ
ಜಂಗಮವಾಳಿಗಿ ಬಂದು ಜರಿದು, ಶೂಲವನಿಳುಹಿ, ಪ್ರಸಾದದ
ಮದ್ದನಿಕ್ಕಿ ಸಲಹು ಕೂಡಲಸಂಗಮದೇವಾ"

ಕುಲ, ಸಿರಿ, ಪದವಿಗಳ ಹಮ್ಮನ್ನು ನೀಗಿಕೊಳ್ಳುವ ವೇಳೆಗೆ ಈ ಹೊಸ ವಿಲೋಭನೆಯೆದ್ದಿತ್ತು. ಲೋಕ ಬಸವಣ್ಣನವರನ್ನು ಮಹಾಭಕ್ತನೆಂದು ಆರಾಧಿಸ ತೊಡಗಿತ್ತು. ಅಳತೆ ಮೀರಿ ಹೊಗಳತೊಡಗಿತ್ತು. ದುರ್ಬಲ ಮನಸ್ಸು ಎಲ್ಲಿ ಹೊಗಳಿಕೆಗೆ ಕಿವಿಯಾಂತು, ಸೋತು ಮತ್ತೆ ಪಾಪಕೂಪದಲ್ಲಿ ಬೀಳುವುದೋ ಎಂಬ ಭಯ ಬಸವಣ್ಣನವರನ್ನು ಆವರಿಸಿತು.

'ನಾನು ಭಕ್ತನೇ-ಭಕ್ತಿಯ ಓಜೆ ಎನಗೆ ಅರಿವಾಗಿದೆಯೇ' ಎಂದು ಬಸವಣ್ಣನವರು ಆತ್ಮಶೋಧ ಮಾಡಿಕೊಳ್ಳಲಾರಂಭಿಸಿದರು. ಶಿವನಿಗಾಗಿ ತಮ್ಮ ತನು, ಮನ, ಧನಗಳನ್ನು ಸೂರೆಗೊಟ್ಟ ಕಣ್ಣಪ್ಪ, ಓಹಿಲಯ್ಯ, ದೇವರ ದಾಸಿಮಯ್ಯ, ಏಾದಾರ ಚೆನ್ನಯ್ಯ ಮೊದಲಾದ ಹಿರಿಭಕ್ತರ ಮುಂದೆ ನಾನೇ ?

"ಆನುಭಕ್ತನಲ್ಲಯ್ಯಾ. ಆನು ವೇಷಧಾರಿಯಯ್ಯ,
ಕಾಟುಗ, ಕೆತ್ತುಗ, ಪೊಲ್ಲುಗನೆಂಬುದು ಎನ್ನ ಹೆಸರು
ಕೂಡಲಸಂಗಮದೇವಾ, ನಿಮ್ಮ ಶರಣರ ಮನೆಯ ಮಗ ನಾನಯ್ಯ."
"ಭಕ್ತಿ ಎಳ್ಳನಿತಿಲ್ಲ. ಯುಕ್ತಿಶೂನ್ಯನಯ್ಯಾ ನಾನು
ತನುವಂಚಕ, ಮನವಂಚಕ, ಧನವಂಚಕ ನಾನಯ್ಯ,
ಕೂಡಲಸಂಗಮದೇವ, ಲೊಳಲೊಟ್ಟೆಲೆನ್ನ ಮಾತು."

ನನಗೆ ಒಂದರಲ್ಲಿಯೂ ಅಚಲವಾದ ನಂಬಿಕೆ ಹುಟ್ಟಿಲ್ಲ. ಒಂದುವನರಿಯದ ಸಂದೇಹಿ ನಾನು, ನಂಬುಗೆ ಇಲ್ಲದ ಡಂಭಕ ನಾನು. ಕಂಡವರು ಆಚರಿಸಿದಂತೆ ನಾನು ಮಾಡುವೆ.

"ಲೌಕಿಕರ ಕಂಡು ಆಡುವೆ ಹಾಡುವೆ,
ತಾರ್ಕಿಕರ ಕಂಡು ಆಡುವೆ ಹಾಡುವೆ,
ಸಹಜಗುಣವೆನ್ನಲಿಲ್ಲಯ್ಯ, ನಿಜಭಕ್ತಿ ಎನಗಿಲ್ಲ."

ನಿಜಭಕ್ತಿ ಮೂಡಬೇಕಾದರೆ ಸಾಧು ಸತ್ಪುರುಷರ, ಶಿವಪಥವನರಿತವರ ಊಳಿಗದಾಳಾಗಬೇಕು. ಅವರ ಕೈಂಕರ್ಯವನ್ನವಲಂಬಿಸಿ ಭಕ್ತಿಯ ಗೋಪುರಕ್ಕೆ ಮೆಟ್ಟಲು ಮೆಟ್ಟಲಾಗಿ ಏರಿಹೋಗಬೇಕು. ಶಿವಕರುಣೆಯನ್ನು ದೊರಕಿಸಿಕೊಳ್ಳ ಬೇಕಾದರೆ ಶಿವಶರಣ ಕೃಪೆಯನ್ನು ಸಂಪಾದಿಸಿಕೊಳ್ಳಬೇಕು.



"ಸಾರ ಸಜ್ಜನರ ಸಂಗವ ಮಾಡುವುದು
ದೂರ ದುರ್ಜನರ ಸಂಗ ಬೇಡವಯ್ಯಾ,
ಆವ ಹಾವಾದಡೇನು ? ವಿಷ ಒಂದೇ.
ಅಂತವರ ಸಂಗ ಬೇಡವಯ್ಯಾ,
ಅಂತರಂಗ ಶುದ್ಧವಿಲ್ಲದವರ ಸಂಗ ಸಿಂಗಿಕಾಳಕೂಟ ವಿಷವು
ಕೂಡಲಸಂಗಮದೇವಾ."

ಹಾಗಾದರೆ ಯಾವನನ್ನು ಸಜ್ಜನ, ಸದ್ಭಕ್ತ, ಸತ್ಯಶರಣನೆಂದು ಭಾವಿಸಬೇಕು?

ಕಾಮನ ತೊರೆದಾತ, ಹೇಮವ ಜರಿದಾತ,
ಭಾನುವಿನ ಉದಯಕ್ಕೆ ಒಳಗಾಗದಾತ ಶರಣನು."

ಅವರ ಅಂತರಂಗವನ್ನು ಶೋಧಿಸಿ, ಅವರ ಯೋಗ್ಯತೆಯನ್ನು ನಿರ್ಧರಿಸಿ ಶರಣನೆಂದು ಒಪ್ಪಿಕೊಳ್ಳುವುದು ಬಸವಣ್ಣನವರಿಗೆ ಬೇಕಿಲ್ಲ.

"ಲಾಂಛನವ ಕಂಡು ನಂಬುವೆ
ಅಂತರಂಗವ ನೀವೇ ಬಲ್ಲಿರಿ
ತೊತ್ತಿಂಗೆ ತೊತ್ತುಗೆಲಸವಲ್ಲದೆ ಅರಸರ ಸುದ್ದಿ ಎಮಗೇಕಯ್ಯ ?
ರತ್ನವಾಣಿಕದಚ್ಚು ಕೂಡಲಸಂಗಮದೇವಾ ನಿಮ್ಮ ಶರಣರು."

ಅವರು ಅಂಗಲಿಂಗ ಸಹಿತವಾಗಿ ಬಂದರೆ ಸಾಕು, ಅವರನ್ನು ಸಂಗನೆಂದೇ ಕಾಣ್ಬೆ. ಆರಾರ ಮನದಲ್ಲಿ ಏನಿಹುದೋ ಬಲ್ಲವರಾರು ? ಒಳ್ಳಿಯದಿರಬಹುದು, ಹೊಲ್ಲಹವಿರಬಹುದು. ಶಿವಭಕ್ತರಾದ ಕಾರಣ ಜಂಗಮವೇ ಲಿಂಗ. ಅವರಲ್ಲಿ ಉಟ್ಟು ತೊಟ್ಟು ಬಂದವರನ್ನು ಉತ್ತಮರೆಂದೂ, ಕಂತೆಬೊಂತೆ ಧರಿಸಿ ಬಂದವರನ್ನು ಅಧಮರೆಂದೂ ಭಾವಿಸಿದರೆ ಮಹಾಪಾಪ. ಸಿರಿವಂತರ ಮನೆಯ ಯಜಮಾನ್ಯ ವಹಿಸುವುದಕ್ಕಿಂತ, ಇಂತಹ ಭಕ್ತರ ಮನೆಯಲ್ಲಿ ದಾಸನಾಗಿರುವುದೇ ಲೇಸು.

"ಅರಸರ ಮನೆಯಲ್ಲಿ ಅರಸಿಯಾಗಿಪ್ಪುದಕ್ಕಿಂತ, ಭಕ್ತರ ಮನೆಯಲ್ಲಿ
ತೊತ್ತಾಗಿಪ್ಪುದು ಕರ ಲೇಸಯ್ಯ,
ತಾರಾ ಅಗ್ಘವಣಿಯ, ನೀಡಾ ಪತ್ರೆಯ, ಲಿಂಗಕ್ಕೆ ಬೋನವ ಹಿಡಿಯಾ
ಎಂಬರು
ಕೂಡಲಸಂಗನ ಮಹಾಮನೆಯಲು ಒಕ್ಕುದನುಣ್ಣಾ ತೊತ್ತೇ ಎಂಬರು."

ಈ ವಿಷಯದಲ್ಲಿ ಪ್ರಭುದೇವರಿಗೂ, ಬಸವಣ್ಣನವರಿಗೂ ಅತಿ ಗಾಢವಾದ ಮತಭೇದ ಕಂಡುಬರುತ್ತದೆ. ಬಸವಣ್ಣನವರು ಭಕ್ತಿಪಾರವಶತೆಯಿಂದ ವಿಚಾರಕ್ಕೆ

ಗಾಣಸ್ಥಾನವಿತ್ತಿದ್ದಾರೆ. ಜಂಗಮನ ಗುಣ, ನಡತೆ, ಯೋಗ್ಯತೆಗಳು ಮುಖ್ಯವಲ್ಲ. ಆವನ ಲಾಂಛನವೇ ಸಾಕು ಎಂದು ಆವರ ಮತ. ಪ್ರಭುದೇವರು ತಮ್ಮ ತೀಕ್ಷ್ಣ[illegible]ದ ಜ್ಞಾನಖಡ್ಗವನ್ನು ಝುಳಪಿಸಿ ಕೇವಲಾದ್ವೈತವನ್ನು ಬೋಧಿಸುತ್ತಾರೆ. ನನಗೊಂದು ಲಿಂಗ-ನಿನಗೊಂದು ಲಿಂಗವೆಂದು ಲಿಂಗಲಾಂಛನವನ್ನು ಅಲ್ಲಗಳೆಯುತ್ತಾರೆ.

"ಹುಸಿಯುಳ್ಳಾತ ಭಕ್ತನಲ್ಲ,
ಬಾಧೆಯುಳ್ಳಾತ ಜಂಗಮನಲ್ಲ,
ಆಶೆಯುಳ್ಳಾತ ಶರಣನಲ್ಲ,
ಇಂತಪ್ಪ ಅಸೆ ಹುಸಿಬಾಧೆಯ ನಿರಾಕರಿಸಿ ಇರಬಲ್ಲರೆ ಗುಹೇಶ್ವರಾ
ನಿಮ್ಮ ಶರಣ."

"ಜಂಗಮ ಘನವೆಂಬೆನೆ, ಜೇಡಿ ಕಿರಿದಾಯ್ತು.
ಲಿಂಗ ಘನವೆಂಬೆನೆ. ಕಲ್ಲುಕುಟಿಗನ ಕೈಯ್ಯಲ್ಲಿ ಮಾಡಿಸಿಕೊಂಡು
ಕಿರಿದಾಯ್ತು.
ಭಕ್ತ ಘನವೆಂಬೆನೆ, ತನುಮನ ಧನದಲ್ಲಿ ವಂಚಕನಾಗಿ ಕಿರಿದಾಯ್ತು,
ಇಂತು ತ್ರಿವಿಧದಲ್ಲಿ ಪರಿಣಾಮವಿಲ್ಲ ಪರಮಾರ್ಥವಿಲ್ಲ,
ಘನವ ಬಲ್ಲವರಾರೋ ಗುಹೇಶ್ವರಾ."

"ಜಗವಂದ್ಯರೆಂದು ನುಡಿವರು ನೋಡಾ,
ಭವಬಂಧನದ ಕುಣಿಕೆಯ ಕಳೆಯಲರಿಯರು ನೋಡಾ
ಶಬ್ದವೇದಿಗಳೆಂದು ನುಡಿದು ನಡೆವರು ನೋಡಾ
ನಿಃಶಬ್ದ ವೇದಿಸದಿದ್ದರೆ ಗುಹೇಶ್ವರ ನೋಡಿ ನಗುತಿಪ್ಪ ನೋಡಾ."

ಬಸವಣ್ಣನವರದು ವ್ಯಷ್ಟಿದೃಷ್ಟಿ, ಪ್ರಭುದೇವರದು ಸಮಷ್ಟಿದೃಷ್ಟಿ. ಸಾಧಕ ಪ್ರತಿಯೊಬ್ಬರ ಹುಳುಕುಗಳನ್ನು ಹುಡುಕಿಕೊಂಡು ಕುಳಿತರೆ ಅವನ ಪಾರಮಾರ್ಥ ಸಾಧಿಸುವುದೇ ಎಂದು ಬಸವಣ್ಣನವರು ವ್ಯಕ್ತಿ ಉತ್ಕ್ರಾಂತಿ ದೃಷ್ಟಿಯಿಂದ ಗುರು, ಲಿಂಗ, ಜಂಗಮಗಳೆಂಬ ಹೆಸರುಗಳೇ ಸಾಕು ಎಂದು ಹೇಳುತ್ತಾರೆ. ಸುವ್ಯವಸ್ಥಿತ ಸಮಾಜದಲ್ಲಿ ಕಪಟಾಚಾರಿಗಳಿಂದ ಬಸವಣ್ಣನವರಂತಹ ಸರಳಚಿತ್ತರು ಮೋಸ ಹೋಗಬಾರದೆಂದು ಪ್ರಭುದೇವರು ಗುರುಲಿಂಗ ಜಂಗಮಗಳ ಅಂತರಂಗವನ್ನು ಕೆದಕುತ್ತಾರೆ.

ಬಸವಣ್ಣನವರ ಸಾಧನ ಭಕ್ತಿಯೋಗದ ಕಡೆ ಹರಿಯುತ್ತದೆ. ತಮ್ಮ ಸಾಧನೆಯಲ್ಲಿ ಬಸವಣ್ಣನರು ಒಂದು ಹೆಚ್ಚಿನ ಸತ್ಯವನ್ನು ನಿತ್ಯ ಮಾಡಿ ತೋರಿದ್ದಾರೆ. -ಪ್ರಪಂಚಕ್ಕೇಕೆ ಪರಮಾರ್ಥ ? -ಪರಮಾರ್ಥವನ್ನು ಮುಪ್ಪಿನ ಕಾಲಕ್ಕೆ ಇಡೋಣ, ಯೌವನದ ವಸಂತ ಪಲ್ಲವಿಸಿರುವಾಗ ಗ್ರೀಷ್ಮವನ್ನು ನೆನೆಯುವುದೇಕೆ ? ಎಂಬ ಪ್ರಶ್ನೆಗಳು ಎಲ್ಲ ಕಾಲದಲ್ಲಿಯೂ ತಲೆದೋರುತ್ತವೆ. ಪಾರಮಾರ್ಥಿಕ ಚಿಂತನೆಗೆ



ತನುವನೀಡಾಡುವುದು ಕೇವಲ ಮೋಕ್ಷ ಪ್ರಾಪ್ತಿಗಲ್ಲ. ಇಹಲೋಕ ಮಾಯೆಯ ಸಾಮ್ರಾಜ್ಯವಾಗಿ ಒಮ್ಮುಖದಲ್ಲಿ ಕಂಡುಬಂದರೂ, ಆ ಮಾಯೆಯನ್ನು ಜಗನ್ಮಾತೆಯಾಗಿ ಭಕ್ತ ಕಾಣಬಲ್ಲ. ಇಲ್ಲಿನ ಬಾಳುವೆಗೆ ಅಧ್ಯಾತ್ಮದೃಷ್ಟಿ, ಪರಿಶುದ್ಧಾಂತಃಕರಣ ಶುಭ್ರ ಜೀವನ ಅಗತ್ಯ. ಇಲ್ಲಿ ಸರಿಯಾಗಿ ಬಾಳಿದವರು ಎಲ್ಲಿಯೂ ಸರಿಯಾಗಿ ಬಾಳಬಲ್ಲರು.

"ಮರ್ತ್ಯಲೋಕವೆಂಬುದು ಕರ್ತಾರನ ಕಮ್ಮಟವಯ್ಯ
ಇಲ್ಲಿ ಸಲ್ಲುವರು ಅಲ್ಲಿಯೂ ಸಲ್ಲುವರಯ್ಯ
ಇಲ್ಲಿ ಸಲ್ಲದವರು ಅಲ್ಲಿಯೂ ಸಲ್ಲರಯ್ಯ, ಕೂಡಲಸಂಗಮದೇವಾ."

ಇದಕ್ಕೆ ವಯಸ್ಸು, ಕಾಲ ನಿರೀಕ್ಷೆ ಮಾಡುತ್ತಾ ಕುಳಿತುಕೊಳ್ಳುವುದಕ್ಕಾಗುವುದಿಲ್ಲ. ಇಂದಿನ ಕೆಲಸವನ್ನು ನಾಳೆಗೆ ಮುಂದೂಡಿ ಕುಳಿತರೆ ಜೀರ್ಣಜೀತನಾವಸ್ಥೆಯಲ್ಲಿ ಏನನ್ನೂ ಸಾಧಿಸಲಾಗದೇ ಮನುಷ್ಯ ಅಪಾರ ದುಃಖಕ್ಕೀಡಾಗುತ್ತಾನೆ.

"ನೆರೆಕೆನ್ನೆಗೆ, ತೆರೆ ಗಲ್ಲಕ್ಕೆ ಶರೀರ ಗೂಡುವೋಗದ ಮುನ್ನ,
ಹಲ್ಲು ಹೋಗಿ, ಬೆನ್ನು ಬಾಗಿ, ಅನ್ಯರಿಗೆ ಹಂಗಾಗದ ಮುನ್ನ,
ಕಾಲಮೇಲೆ ಕೈಯನೂರಿ, ಕೋಲ ಹಿಡಿಯದ ಮುನ್ನ,
ಮುಪ್ಪಿಂದೊಪ್ಪವಳಿಯದ ಮುನ್ನ,
ಮೃತ್ಯು ಮುಟ್ಟದ ಮುನ್ನ,
ಪೂಜಿಸು ಕೂಡಲಸಂಗಮದೇವನ."

ಸಂಸಾರವೆಂಬುದು ಗಾಳಿಯ ಸೊಡರು, ಅದು ಯಾವಾಗ ಆರಿಹೋಗುವುದೋ ಹೇಳಲು ಬರುವಂತಿಲ್ಲ. ಸಿರಿಯೆಂಬುದು ಸಂತೆಯ ಮಂದಿಯಂತೆ, ಕಾಡು ಬೆಳದಿಂಗಳಂತೆ, ಅವಕ್ಕೆ ಶಾಶ್ವತತೆಯಿಲ್ಲ. ಅವುಗಳನ್ನು ನೆಚ್ಚಿ ಮಾನವ ಪರಮಾತ್ಮ ಸಾಧನೆಯನ್ನು ಅಲ್ಲಗಳೆಯಬಾರದು. ಅಹರ್ನಿಶಿಯೂ ದುಡಿದು ಬೆಂಡಾಗಿ, ಒಡಲಿನ ಕಳವಳಕ್ಕಾಗಿ ಎಲ್ಲವನ್ನೂ ಬಲಿದಾನವಾಗರ್ಪಿಸಿ, ಮನುಷ್ಯ ಸಾಧಿಸುವುದೇನನ್ನು ? ಅಷ್ಟೊಂದು ಷೋಡಶೋಪಚಾರಗಳನ್ನು ಒಪ್ಪಿಕೊಳ್ಳುವ ಒಡಲಾದರೂ ಶಾಶ್ವತವೇ, ಮರಣಾತೀತವೇ ?

"ವ್ಯಾಧನೊಂದು ಮೊಲನ ತಂದರೆ, ಸಲುವ ಹಾಗಕ್ಕೆ ಬೆಲೆವರಯ್ಯ,
ನೆಲನಾಳ್ವನ ಹೆಣನೆಂದರೆ, ಒಂದಡಿಕೆಗೆ ಕೊಂಬವರಿಲ್ಲ ನೋಡಯ್ಯ,
ಮೊಲನಿಂದ ಕರಕಷ್ಟ ನರನ ಬಾಳುವೆ."

ದೇಹಕ್ಕೆ ಪಡುವ ಕಷ್ಟವೆಲ್ಲಾ ನೀರಬೊಬ್ಬುಳಿಕೆಗೆ ಕಬ್ಬುನದ ಕಟ್ಟು ಕೊಟ್ಟು ಸುರಕ್ಷಿತಮಾಡುವ ಪ್ರಯತ್ನದಂತೆ ನಿರರ್ಥಕ. ಅದು ಒಂದಲ್ಲೊಂದು ದಿನ ಕೊಳೆತು ಹೋಗಲೇಬೇಕು. ಸಾಮಾನ್ಯನಿಗೆ ಆ ದೆಸೆ ತಪ್ಪಿದ್ದಲ್ಲ. ಹಂಸತೂಲಿಕಾತಲ್ಪದಲ್ಲಿ ಬೆಳೆದ ನೆಲನಾಳ್ವನಿಗೂ ತಪ್ಪಿದ್ದಲ್ಲ.

ಶಾಶ್ವತವಾದ, ಅನಂತವಾದ, ಅಮರವಾದ ಜೀವನವನ್ನು ಸಾಧಿಸುವುದಕ್ಕೆ ಮನುಷ್ಯ ಅಧ್ಯಾತ್ಮ ಜೀವಿಯಾಗಬೇಕು. ಬಸವಣ್ಣನವರ ಕವಿ ಹೃದಯ ಭಕ್ತಿಯ ಕಡೆಗೆ ಹರಿಯಿತು, ಶಿವನನ್ನು ಅವರು ಭಕ್ತಿಕಂಪಿತ ಮೂರ್ತಿಯನ್ನಾಗಿ ಕಂಡರು. ಶಿವನಿಗೆ ಪ್ರಿಯವಾಗಿದ್ದುದೂ ಭಕ್ತನ ರಸವಾಣಿ.

"ನಾದಪ್ರಿಯ ಶಿವನೆಂಬರು ನಾದ ಪ್ರಿಯ ಶಿವನಲ್ಲಯ್ಯ,
ವೇದಪ್ರಿಯ ಶಿವನೆಂಬರು ವೇದಪ್ರಿಯ ಶಿವನಲ್ಲಯ್ಯ,
ನಾದವ ಮಾಡಿದ ರಾವಣಂಗೆ ಅರೆಯಾಯುಷ್ಯವಾಗಿತ್ತು.
ವೇದವನೋದಿದ ಬ್ರಹ್ಮನ ಶಿರ ಹೋಯಿತ್ತು.
ನಾದಪ್ರಿಯನೂ ಅಲ್ಲ, ವೇದಪ್ರಿಯನೂ ಅಲ್ಲ,
ಭಕ್ತಿಪ್ರಿಯ ನಮ್ಮ ಕೂಡಲಸಂಗಮದೇವಾ."

"ಗೀತವ ಹಾಡಿದಡೇನು,
ಶಾಸ್ತ್ರ ಪುರಾಣಂಗಳ ಕೇಳಿದಡೇನು,
ವೇದ ವೇದಾಂತವ ನೋಡಿದಡೇನು,
ಮನ ಒಲಿದು ಲಿಂಗಜಂಗಮನ ಪೂಜಿಸಲರಿಯದವರು ?
ಎಲ್ಲರಲ್ಲಿ ಅನುಭಾವಿಯಾದಡೇನು ?
ಭಕ್ತಿಯಿಲ್ಲದವರನೊಲ್ಲ ಕೂಡಲಸಂಗಮದೇವಾ."

"ಆಡಿದರೇನು, ಹಾಡಿದರೇನು, ಓದಿದರೇನು ?
ತ್ರಿವಿಧ ದಾಸೋಹವಿಲ್ಲದನ್ನಕ್ಕ
ಆಡದೇ ನವಿಲು, ಹಾಡದೇ ತಂತಿ, ಓದದೇ ಗಿಣಿ ?
ಭಕ್ತಿ ಇಲ್ಲದವರನೊಲ್ಲ ಕೂಡಲಸಂಗಮದೇವಾ."

ಭಕ್ತಿಯೆಂಬುದು ಬಾಯಬಡಿವಾರವಲ್ಲ. ಅದಕ್ಕೆ ತ್ಯಾಗ ಬೇಕು.

"ತನುವ ಕೊಟ್ಟು ಗುರುವನೊಲಿಸಲೇಬೇಕು
ಮನವ ಕೊಟ್ಟು ಲಿಂಗವನೊಲಿಸಲೇಬೇಕು
ಧನವ ಕೊಟ್ಟು ಜಂಗಮವನೊಲಿಸಲೇಬೇಕು
ಈ ತ್ರಿವಿಧವ ಹೊರಗು ಮಾಡಿ ಹರೆಯ ಹೊಯಿಸಿ, ಕುರುಹ
ಪೂಜಿಸುವವರ ಮೆಚ್ಚ ಕೂಡಲಸಂಗಮದೇವಾ."

"ಮಾತಿನ ಮಾತಿನಲಿಪ್ಪುದೆ ಭಕ್ತಿ ?
ಮಾಡಿ ತನು ಸವೆಯುದನ್ನಕ್ಕ ಧನ ಸವೆಯುದನ್ನಕ್ಕ ಅಪ್ಪುದೆ ಭಕ್ತಿ ?
ಕೂಡಲಸಂಗಮದೇವನೆಲುದೋರಿ ಸರಸವಾಡುವನು, ಸೈರಿಸದನ್ನಕ್ಕ
ಅಪ್ಪುದೆ ಭಕ್ತಿ ?"

ಯಾರನ್ನಾದರೂ ಮೆಚ್ಚಿಸಬಹುದು, ಅರ್ಜಿಸಬಹುದು, ಕೂಡಲಸಂಗಮ



ದೇವನ ಸಹವಾಸ ಬಹಳ ಕಷ್ಟ. ಭಕ್ತನಿಗೆ ಎಷ್ಟು ಪ್ರತಿಬಂಧಕಗಳನ್ನು ತಂದರೂ, ಉಪಟಳಗಳನ್ನಿಟ್ಟರೂ, ಪರೀಕ್ಷೆಗಳನ್ನೊಡ್ಡಿದರೂ ಸಂಗನಿಗೆ ತೃಪ್ತಿಯಿಲ್ಲ. ಆರ್ತತೆಯಿಂದ ಅಡಿಗಡಿಗೆ 'ಎನ್ನ ಮನವ ಜಡಿದು ನೋಡದಿರಯ್ಯ ಬಡವನೆಂದೆನ್ನ ಕಾಡದಿರಯ್ಯ' ಎಂದು ಬೇಡುತ್ತಾರೆ. ಈ ಸ್ಥಿತಿಯಲ್ಲಿನ ತಮ್ಮ ಅನುಭವವನ್ನು ಬಸವಣ್ಣನವರು ಚಿತ್ತವೇಧಕವಾಗಿ ವರ್ಣಿಸುತ್ತಾರೆ.

ಒಡೆಯರಿಗೊಡವೆಯನೊಪ್ಪಿಸಲಾರದೆ, ಮೊರೆ ಇಡುವ ಮಾನವ
ನಾನೇನೆಂಬೆ ?
ನೆತ್ತಿಯಲಿ ಅಲಗು ತಿರುಹುವಂತಪ್ಪ ವೇದನೆಯಹುದೆನಗೆ ?
ಬೆಂದ ಹುಣ್ಣ ಕಂಬಿಯಲ್ಲಿ ಕೀವುವಂತಪ್ಪ ವೇದನೆಯಹುದೆನಗೆ ?
ಕೂಡಲಸಂಗಮದೇವ ಮಾಡಿ ನೋಡುವ ಹಗರಣವ
ನಾ ಮಾಡಿಹೆನೆಂದರೆ ಮನಕ್ಕೆ ಮನ ನಾಚದೆ ಅಯ್ಯಾ ?

ಐಹಿಕ ಸುಖ ಸಂಪತ್ತಿನ ಆಸೆ ಬೇಡ, ಭಕ್ತನ ವಿಮುಕ್ತ ಸ್ಥಿತಿಯನ್ನಾದರೂ ಯೋಚಿಸಬಾರದೇ ? ಅದನ್ನೂ ಸಂಗನೊಲ್ಲ, ಅದಕ್ಕೂ ಸಂಗಮೆಚ್ಚ.

"ಮಾಡಿದೆನೆಂದು ಮನದಲ್ಲಿ ಹೊಳೆದರೆ ಏಡಿಸಿ ಕಾಡಿತ್ತು ಶಿವನ ಡಂಗುರ.
ಮಾಡಿದೆನೆನ್ನದಿರಾ ಲಿಂಗಕ್ಕೆ ಮಾಡಿದೆನೆನ್ನದಿರಾ ಜಂಗಮಕ್ಕೆ
ಮಾಡಿದೆನೆಂಬುದು ಮನದಲ್ಲಿಲ್ಲದಿದ್ದರೆ ಬೇಡಿತ್ತನೀವನು
ಕೂಡಲಸಂಗಮದೇವಾ".

"ನೆಚ್ಚಿದೆನೆಂದರೆ, ಮೆಚ್ಚಿದೆನೆಂದರೆ, ಸಲೆ ಮಾರುಹೋದೆನೆಂದರೆ,
ತನುವನಲ್ಲಾಡಿಸಿ ನೋಡುವೆ ನೀನು
ಮನವನಲ್ಲಾಡಿಸಿ ನೋಡುವೆ ನೀನು
ಧನವನಲ್ಲಾಡಿಸಿ ನೋಡುವೆ ನೀನು
ಇವಕ್ಕೆಲ್ಲಕಂಜದಿದ್ದರೆ ಭಕ್ತಿ ಕಂಪಿತ ನಮ್ಮ ಕೂಡಲಸಂಗಮದೇವಾ."

"ಶಿವಭಕ್ತನಾಗಿ ತನ್ನ ಹಿಡಿದಿಹೆನೆಂದು ಹೋದರೆ ನುಗ್ಗು ಮಾಡುವ
ನುಸಿಯಾಡುವ ಮಣ್ಣ ಮಾಡುವ, ಮಸಿಯ ಮಾಡುವ
ಕೂಡಲಸಂಗಮದೇವರ ನೆರೆ ನಂಬಿದನಾದರೆ, ಕಡೆಗೆ ತನ್ನಂತೆ ಮಾಡುವ,"

"ಅರೆವನಯ್ಯ ಸಣ್ಣವನ್ನಕ್ಕ
ಬರೆವನಯ್ಯ ಬಣ್ಣಗಾಗುವನಕ್ಕ
ಅರೆದರೆ ಸಣ್ಣನಾಗಿ ಬರೆದರೆ ಬಣ್ಣವಾದರೆ
ಕೂಡಲಸಂಗಮದೇವ ಒಲಿದು ಸಲಹುವನು."

ಭಕ್ತಿ ಪ್ರಪಂಚದಲ್ಲಿ ತನ್ನ ಅನುಭವಗಳನ್ನು ಕ್ರೋಢೀಕರಿಸಿ,

"ಭಕ್ತಿಯೆಂಬುದ ಮಾಡಬಾರದು
ಗರಗಸದಂತೆ ಹೋಗುತ್ತ ಕೊಯ್ವುದು, ಬರುತ್ತ ಕೊಯ್ವುದು
ಘಟಸರ್ಪನಲ್ಲಿ ಕೈ ದುಡುಕಿದರೆ ಹಿಡಿವುದು ಮಾಬುದೇ
ಕೂಡಲಸಂಗಮದೇವಾ."

ಎಂದು ಹೇಳುತ್ತಾರೆ.

(ಮುಂದುವರಿಯುವುದು)

(ಮುಂದುವರಿದ ಲೇಖನ)

# ಜಗದ್ದರ್ಶನ ಮಾಲೆ–೪

## ಚಾರ್ವಾಕರು ಮತ್ತು ಪುರುಷಾರ್ಥಗಳು :

—ಡಾ. ಗೋವಿಂದ ಅ. ಜಾಲಿಹಾಳ

ಸುಖತತ್ತ್ವೋಪಾಸಕರಾದ ಅವರು ಜೀವನದಲ್ಲಿಯ ಸುಖದ ಪ್ರಮಾಣವನ್ನು ಹೆಚ್ಚಿಸುವುದು ಮತ್ತು ದುಃಖದ ಪ್ರಮಾಣವನ್ನು ಕಡಿಮೆ ಮಾಡುವುದು ಎಲ್ಲ ಮಾನವರ 'ಕರ್ತವ್ಯ' ಅಥವಾ 'ಧರ್ಮ' ಎಂದೇ ಭಾವಿಸಿದ್ದರು. ಮತ್ತು ಈ 'ಕರ್ತವ್ಯ'ವನ್ನು ಅಥವಾ ಧರ್ಮವನ್ನು ಪಾಲಿಸಲು ಎಲ್ಲರೂ ತಂತಮ್ಮ ಸ್ವಾಭಾವಿಕ ಪ್ರವೃತ್ತಿಗಳನ್ನು ಮತ್ತು ಆಶೆ-ಆಕಾಂಕ್ಷೆಗಳನ್ನು ಸ್ವಲ್ಪ-ಸ್ವಲ್ಪವಾದರೂ ನಿಯಂತ್ರಿಸಿಕೊಳ್ಳಬೇಕಾಗುತ್ತದೆಂಬುದನ್ನು ದೂರ್ತ-ಚಾರ್ವಾಕರಲ್ಲದಿದ್ದರೂ[5] ಶಿಷ್ಟ ಅಥವಾ ಸುಶಿಕ್ಷಿತ ಚಾರ್ವಾಕರು ಒಪ್ಪಿಕೊಂಡಿದ್ದರು. 'ಕಾಮಸೂತ್ರ'ದ ಕರ್ತೃವಾದ ವಾತ್ಸಾಯನನು ನೀತಿ-ಸಿದ್ಧಾಂತದ ಮಟ್ಟಿಗೆ ಚಾರ್ವಾಕ-ದಾರ್ಶನಿಕನೆಂದೇ ಪರಿಗಣಿಸಲ್ಪಡುವನು. ಅವನನ್ನು ನಾವು ಅತ್ಯಂತ ಶಿಷ್ಟನಾದ ಮತ್ತು ಸುಶಿಕ್ಷಿತನಾದ ಚಾರ್ವಾಕೋತ್ತಮ ಎಂದು ಪರಿಗಣಿಸಬಹುದು. ವಾತ್ಸಾಯನನಂತು ಚತುರ್ವಿಧ ಪುರುಷಾರ್ಥಗಳಲ್ಲಿ 'ಅರ್ಥ' ಮತ್ತು 'ಕಾಮ' ಇವೆರಡನ್ನಷ್ಟೆ ಅಲ್ಲದೆ 'ಧರ್ಮ'ವನ್ನು ಕೂಡ ಮಾನ್ಯ ಮಾಡಿದ್ದನು. ಆದರೆ ಧರ್ಮವನ್ನು ಕುರಿತ ಅವನ ವ್ಯಾಖ್ಯೆಯು ವೇದಾಂತಿಗಳ ಮತ್ತು ಮೀಮಾಂಸಕರ ವ್ಯಾಖ್ಯೆಗಿಂತ ಬಹಳ ಭಿನ್ನವಾಗಿತ್ತು. ಅವನು 'ಅರ್ಥ'

---

5 ಚಾರ್ವಾಕರಲ್ಲಿ 'ಧೂರ್ತ' ಮತ್ತು 'ಶಿಷ್ಟ ಅಥವಾ ಸುಶಿಕ್ಷಿತ' ಎಂಬ ಎರಡು ಪ್ರಕಾರದ ದಾರ್ಶನಿಕರು ಸಾಂಪ್ರದಾಯಿಕವಾಗಿ ಗುರುತಿಸಲ್ಪಟ್ಟಿದ್ದಾರೆ ಧೂರ್ತ ಚಾರ್ವಾಕರು, ಅವರ ಹೆಸರೇ ಸೂಚಿಸುವಂತೆ ಧೂರ್ತರೂ. ಯಾವುದೇ ನೀತಿ, ನಿಯಮ ಮತ್ತು ಪ್ರಾಮಾಣಿಕತೆಗಳಿಗೆ ಒಳಪಡದಂಥವರೂ, ಆಗಿದ್ದರು ದೇವರು, ಆತ್ಮ ಧರ್ಮ. ನೀತಿ ಇವಾವುಗಳಲ್ಲೂ ಅವರಿಗೆ ವಿಶ್ವಾಸವಿರಲಿಲ್ಲ. ಅವರ ಪ್ರಕಾರ ನೆಲ, ಜಲ, ವಾಯು ಮತ್ತು ಅಗ್ನಿ ಈ ಚತುರ್ಮಹಾಭೂತಗಳಷ್ಟೇ ನಿಜ-ವಸ್ತುಗಳಾಗಿದ್ದವು ಮತ್ತು ದೇಹವು ಅಥವಾ ಶರೀರವು ಈ ನಾಲ್ಕು ಮಹಾ ಭೂತಗಳ ಅಣವಿಕ (Atamic) ಜೋಡಣೆ ಮಾತ್ರವಾಗಿದ್ದಿತು. ಇದಕ್ಕೆ ವಿರುದ್ಧವಾಗಿ, ಶಿಷ್ಟ ಅಥವಾ ಸುಶಿಕ್ಷಿತ ಚಾರ್ವಾಕರು ದೇಹದ ಜೊತೆಗೆ 'ಆತ್ಮ' ಎಂಬ ಒಂದು ವಸ್ತುವು ಜೊತೆಗೇ ನಾಶಹೊಂದುತ್ತದೆಂಬುದಾಗಿಯೂ ಅಭಿಪ್ರಾಯಪಟ್ಟಿದ್ದರು. ಧೂರ್ತಚಾರ್ವಾಕರು ಧರ್ಮ ಮತ್ತು ನೀತಿ ಇವೆರಡನ್ನು ಹೆಚ್ಚು-ಕಡಿಮೆ ಪೂರ್ತಿಯಾಗಿ ತಿರಸ್ಕರಿಸಿದ್ದರು. ಆದರೆ ಶಿಷ್ಟ ಅಥವಾ ಸುಶಿಕ್ಷಿತ ಚಾರ್ವಾಕರು ಅವೆರಡನ್ನು ಅವುಗಳ ಸಾಂಪ್ರದಾಯಿಕ ಅರ್ಥದಲ್ಲಿ ಮಾತ್ರ ತಿರಸ್ಕರಿಸಿದ್ದರು.

ಮತ್ತು 'ಧರ್ಮ' ಇವೆರಡು ಕಾಮಸಾಧನೆಗೆ (ಕಾಮಿಕ ಫಲ ಸಾಧನೆಗೆ) ಸಾಧನಗಳು ಅಥವಾ ಉಪಾಯಗಳು ಮಾತ್ರ ಎಂದು ಭಾವಿಸಿದ್ದನು. ಮೋಕ್ಷಕ್ಕಾಗಿ ಧರ್ಮ (ವೇದಾಂತಿಗಳು ಭಾವಿಸಿದಂತೆ) ಧರ್ಮಕ್ಕಾಗಿಯೇ ಧರ್ಮ (ಪೂರ್ವ ಮೀಮಾಂಸಕರು ಭಾವಿಸಿದಂತೆ) ಎಂಬ ವಿಚಾರಗಳನ್ನು ಮತ್ತು ಧೋರಣೆಗಳನ್ನು ವಾತ್ಸ್ಯಾಯನನು ಪೂರ್ತಿಯಾಗಿ ಒಪ್ಪಿಕೊಂಡಿರಲಿಲ್ಲ. ಇತರ ಚಾರ್ವಕರಂತೂ ಅವುಗಳನ್ನು ಪೂರ್ತಿಯಾಗಿ ತಿರಸ್ಕರಿಸಿದ್ದರು. ಆದರೆ ಇದರರ್ಥ ಚಾರ್ವಾಕರು ಒಟ್ಟಾರೆ 'ಧರ್ಮ' ಎಂಬುದರ ಕಲ್ಪನೆಯನ್ನೇ ಅಲ್ಲಗಳೆದಿದ್ದರು ಎಂದಾಗುವುದಿಲ್ಲ. ಆದರೂ ಚಾರ್ವಾಕ ಮತವನ್ನು ಅನೇಕರು ಆ ರೀತಿಯಲ್ಲಿ ಅರ್ಥೈಸಿದ್ದಾರೆ. ಉದಾಹರಣಾರ್ಥವಾಗಿ ದಿವಂಗತ ಪ್ರೊಫೆಸರ್ ಎಂ. ಹಿರಿಯಣ್ಣನವರಂಥ ಅತ್ಯಂತ ನಿಷ್ಪಕ್ಷಪಾತಿಗಳಾದ ಮತ್ತು ಉದಾರ ಮನಸ್ಕರಾದ ಘನ ವಿದ್ವಾಂಸರು ಕೂಡ ಚಾರ್ವಾಕ ಮತವನ್ನು ಈ ಕೆಳಗಿನಂತೆ ತಪ್ಪಾಗಿ ಅರ್ಥೈಸಿದ್ದಾರೆ.

'One may think of a School of thought without the Ideal of moksa, but not without that of dharma also. It may be that death is final and nothing remains after words; but to believe in an Ideol of life devoid of dharma is to sedule man to the level of the brute. It is difficult to believe that these could ever have existed such a school of thought.'[6] ನಮ್ಮ ಇನ್ನೊಬ್ಬ ಘನ ತತ್ವ ಶಾಸ್ತ್ರಜ್ಞರಾದ ದಿವಂಗತ ಡಾ. ಎಸ್. ರಾಧಾಕೃಷ್ಣನ್ ಅವರಂತೂ ಚಾರ್ವಾಕ ಮತವನ್ನು ಇನ್ನೂ ಹೆಚ್ಚು ತಪ್ಪಾಗಿ ಅರ್ಥೈಸಿದ್ದಾರೆ. ಉದಾಹರಣಾರ್ಥವಾಗಿ, ತಮ್ಮ 'Indian Philosophy' ಎಂಬ ಗ್ರಂಥದಲ್ಲಿ ಚಾರ್ವಾಕ ಮತವನ್ನು ವಿಮರ್ಶಿಸುತ್ತ ಡಾ. ರಾಧಾಕೃಷ್ಣನ್ ಹೀಗೆ ಬರೆಯುತ್ತಾರೆ. There was a distrust of everything good, high pure and Compassionate'[7]. ಚಾರ್ವಾಕ ಮತವನ್ನು ಕುರಿತ ಡಾ. ಎಸ್. ರಾಧಾಕೃಷ್ಣನ್ನರ ಈ ಹೇಳಿಕೆಯನ್ನು ತಮ್ಮ ಮಹತ್ವದ ಸಂಶೋಧನಾ ಗ್ರಂಥವಾದ 'The Naturalistic Tradition In Indian Thought' (Motilal and Banarasidass, Delhi, 1964) ಎಂಬ ಕೃತಿಯಲ್ಲಿ ವಿಮರ್ಶಿಸುತ್ತ

6 Outlines P. 194.

7 S. Radhakrishnan Indian Philosopy (George Allen & unwin ltd, London) 1948, Vol. I. P. 281.



ಅಮೇರಿಕನ್ ವಿದ್ವಾಂಸರಿಂದ ಡೇಲ್ ರೈಪೆ (Dale Riepe) ಅವರು ಈ ರೀತಿ ಹೇಳುತ್ತಾರೆ.

'We cannot agree with Radhakrishnan who says of Charvaka; There was a distrust of every thing good, high, pure and compassionate. He may be correct with regard to 'compassionate' and one need not quarrel with the rest. If he had explicitly stated what we think he meant, namely; 'There was a distrust of everything traditionally regarded as good, high. Pure and Compassionate; It may be said from the availabale metarial that Charvaka holds truth. Integrity, consistency and freedom of thought In the highest esteem This is a side from the question of whether we regard these things as noble or Ignoble'[8] ಪ್ರೊಫೆಸರ್ ಡೇಲ್ ರೈಪೆ ಅವರ ಈ ಹೇಳಿಕೆ ನಿಜವಾದದ್ದು–ಕನಿಷ್ಠ ಪಕ್ಷ 'ಸುಶಿಕ್ಷಿತ ಚಾರ್ವಾಕ'ರಿಗೆ ಸಂಬಂಧಿಸಿದಂತೆ ನಿಜವಾದದ್ದು ಎಂದು ನನಗನಿಸುತ್ತದೆ. ಕೀರ್ತಿಶೇಷ ವಿದ್ವಾಂಸರುಗಳಾದ ಪ್ರೊ. ಎಂ. ಹಿರಿಯಣ್ಣ ಮತ್ತು ಡಾ. ಎಸ್. ರಾಧಾಕೃಷ್ಣನ್ ಇವರಿಬ್ಬರೂ (ಇಬ್ಬರೂ ಅದ್ವೈತ ಸಿದ್ಧಾಂತಿಗಳು). ಆದರಲ್ಲೂ ಡಾ. ರಾಧಾಕೃಷ್ಣನ್ನರು–ಚಾರ್ವಾಕ ಮತವನ್ನು ಸಾಕಷ್ಟು ತಪ್ಪಾಗಿ, ಪೂರ್ವಗ್ರಹಪೀಡಿತರಾಗಿ ಅರ್ಥೈಸಿದ್ದರು (ಆದರೂ ಇವರಿಬ್ಬರೂ–ಆದರಲ್ಲೂ ಪ್ರೊ. ಹಿರಿಯಣ್ಣನವರು–ಈ ವಿಷಯದಲ್ಲಿ ಇತರ ವೇದಾಂತಗಳಿಗಿಂತ ಎಷ್ಟೊ ವಾಸಿ!) ಹೀಗಾಗಿ ಅವರು ಚಾರ್ವಾಕರ ವಿರೋಧವು ವೇದೋಪದಿಷತ್ತುಗಳ (ಮುಖ್ಯವಾಗಿ ವೈದಿಕ ಕರ್ಮಕಾಂಡದ) ಅನುಸಾರವಾಗಿ ಸಾಂಪ್ರದಾಯಿಕವಾಗಿ ರೂಢವಾದ ಧರ್ಮವನ್ನು ಕುರಿತು ಹಾಗು ಸ್ವರ್ಗ ಮೋಕ್ಷಗಳ ಕಲ್ಪನೆಯನ್ನು ಕುರಿತು ಇದ್ದಿತೇ ಹೊರತು ಒಟ್ಟಾರೆ ಧರ್ಮದ ಕಲ್ಪನೆಯನ್ನೇ ಕುರಿತು ಇದ್ದಿರಲಿಲ್ಲ ಅನ್ನುವುದನ್ನು ಹಾಗೂ ಚಾರ್ವಾಕ ದಾರ್ಶನಿಕರ ಸೈದ್ಧಾಂತಿಕ ಪ್ರಯತ್ನವು ಅರ್ಥ-ಕಾಮಗಳ-ಅದರಲ್ಲೂ ಕಾಮದ–ಪ್ರಾಧಾನ್ಯತೆಯ ಬೆಳಕಿನಲ್ಲಿ ಧರ್ಮದ ವ್ಯಾಖ್ಯೆಯನ್ನು, ವ್ಯಾಪ್ತಿಯನ್ನು ಮತ್ತು ಮಹತ್ವನನ್ನು ಪುನರ್ವಿಮರ್ಶಿಸುವುದಾಗಿತ್ತು ಅನ್ನುವುದನ್ನು ಅರಿಯಲಾರದೇ

8 Dale Riepe; The Naturalistic Tradition In Indian thought (Motilal Banarasidass, Delhi); 1964, P. P.75 -76.

ಹೋದರು. ಆದರೆ ಪ್ರೊ. ಡೇಲ್‌ರೈಪೆ ಅವರಂಥ ಪಾಶ್ಚಾತ್ಯ ತತ್ತ್ವಶಾಸ್ತ್ರಜ್ಞರು ತಮ್ಮ ಹೆಚ್ಚು ವಸ್ತುನಿಷ್ಠವೂ, ನಿಷ್ಪಕ್ಷಪಾತ ದೃಷ್ಟಿಯವೂ, ಪೂರ್ವಗ್ರಹಮುಕ್ತವೂ ಮತ್ತು ಅಲಿಪ್ತವೂ ಆದಂಥ ದೃಷ್ಟಿ-ಧೋರಣೆಗಳಿಂದಾಗಿ ಚಾರ್ವಾಕರ ಸಿದ್ಧಾಂತದಲ್ಲಿನ ಈ ಮೇಲಿನ ಸೂಕ್ಷ್ಮಾಂಶಗಳನ್ನು ಅರಿತುಕೊಂಡರು ಮತ್ತು ಮೆಚ್ಚಿಕೊಂಡರು. ಚಾರ್ವಾಕರಲ್ಲಿ (ಅರ್ಥಾತ್, ಸುಶಿಕ್ಷಿತ ಚಾರ್ವಾಕರಲ್ಲಿ) ಸತ್ಯಪ್ರಿಯತೆ, ಋಜುತ್ವ ಮತ್ತು ತರ್ಕಸಂಬದ್ಧತೆ ಈ ಸದ್ಗುಣಗಳು ಕಂಡುಬರುತ್ತವೆ ಅನ್ನುವುದಕ್ಕೆ ಪ್ರೊಫೆಸರ್ ರೈಪೆ ಈ ಕೆಳಗಿನ ಕಾರಣಗಳನ್ನು ಕೊಡುತ್ತಾರೆ: ೧) 'ಪ್ರಮಾ' ಅಥವಾ ಸತ್ಯವು ಅವರಿಗೆ ಪವಿತ್ರವೆಂದು ಪರಿಗಣಿಸಲ್ಪಟ್ಟ ಶ್ರುತಿಗ್ರಂಥದಲ್ಲಿ ಕಂಡುಬರದೇ ಇದ್ದುದರಿಂದಾಗಿ ಚಾರ್ವಾಕರು ಅದನ್ನು ಪ್ರತ್ಯಕ್ಷಾನುಭವದಲ್ಲಿಯೂ, ಅಂಥ ಅನುಭವವನ್ನು ಆಧರಿಸಿದ ಹೇಳಿಕೆಗಳಲ್ಲಿಯೂ ಕಂಡಹಿಡಿಯಲು ಉಜ್ಜುಗಿಸಿದರು. ೨) ಆ ಬಳಿಕ, ಸತ್ಯವು ನಮ್ಮ ಪ್ರತ್ಯಕ್ಷಾನುಭವವನ್ನು ಆಧರಿಸಿರುತ್ತದೆ ಅನ್ನುವುದನ್ನು ಒಮ್ಮೆ ಒಪ್ಪಿಕೊಂಡ ನಂತರ, ಅವರು ಅದು (ಸತ್ಯವು) ಅನು-ಗಮನ-ನಿಗಮನಾತ್ಮಕವಾದ (Inductive and Deductive) ಅನುಮಾನ (Inference) ವನ್ನು ಆಧರಿಸಿರುತ್ತದೆ ಎಂಬ ನಂಬಿಕೆಯನ್ನು ಕೈಬಿಟ್ಟು ತಮ್ಮ ತರ್ಕಸಂಬದ್ಧತೆಯನ್ನು ನಿದರ್ಶಿಸಿದರು. (೩) ಶ್ರುತಿಪ್ರಾಮಾಣ್ಯವನ್ನು ಅನುಸರಿಸುತ್ತಿದ್ದಂಥ ಬಲಾಢ್ಯರಾದ ವೈದಿಕ ಪುರೋಹಿತ ವರ್ಗದವರ ಹೆದರಿಕೆ-ಬೆದರಿಕೆಗಳಿಗೆ ಮಣಿಯದೆ, ಕೇವಲ ಪ್ರತ್ಯಕ್ಷಾನುಭವಜನ್ಯ-ಜ್ಞಾನದ ಬೆಂಬತ್ತಿ ಚಾರ್ವಾಕರು ತಮ್ಮ ಋಜುತ್ವವನ್ನು ಮತ್ತು ಧೈರ್ಯವನ್ನು ತೋರಿಸಿದರು. ಈ ವಿಷಯದಲ್ಲಿ ಚಾರ್ವಾಕರ ಋಜುತ್ವವು ಸಾಂಖ್ಯದರ್ಶನದ ಸಂಸ್ಥಾಪಕನಾದ ಕಪಿಲಮುನಿಯ ಋಜುತ್ವಕ್ಕಿಂತ ಮೇಲ್ಮಟ್ಟದ್ದಾಗಿತ್ತು ಎಂದು ಹೇಳಬಹುದು. (೪) ವಿಚಾರ ಸ್ವಾತಂತ್ರ್ಯವನ್ನು ತಮ್ಮ ಸಮಕಾಲೀನರಾಗಿದ್ದ ಇನ್ನಿತರ ವಿಚಾರಿ (Thinkers) ಗಳಿಗಿಂತ ಹಾಗೂ ತತ್ತ್ವಸಿದ್ಧಾಂತಿಗಳಿಗಿಂತ ಹೆಚ್ಚಾಗಿ ಚಾರ್ವಾಕರೇ ತಮ್ಮ ಚಿಂತನೆಯಲ್ಲಿ, ಸಿದ್ಧಾಂತದಲ್ಲಿ ಮತ್ತು ಆಚಾರದಲ್ಲಿ ತೋರಿಸಿದ್ದರಾದ್ದರಿಂದ ಅದನ್ನು ಅವರು ಮನ್ನಿಸಿದ್ದರೆಂಬುದು ಸುಸ್ಪಷ್ಟ ಮತ್ತು ಸ್ವಸ್ಪಷ್ಟ

## ಚಾರ್ವಾಕರು ಮತ್ತು ವರ್ಣಾಶ್ರಮ ಧರ್ಮ:

ಚಾರ್ವಾಕರು ಸಮಾಜ-ನೀತಿ ಮತ್ತು ಸಮಾಜ-ಧರ್ಮಗಳನ್ನು ಕುರಿತು ಐತಿಹಾಸಿಕವಾಗಿ ಖಚಿತವಾದ ಮತ್ತು ವಿಶ್ವಾಸಾರ್ಹವಾದ ಮಾಹಿತಿಯು ನಮಗೆ



ಹೆಚ್ಚಾಗಿ ದೊರೆಯುವುದಿಲ್ಲವಾದರೂ,[9] ಚಾರ್ವಾಕರು ವೈದಿಕ ಸಂಪ್ರದಾಯದ ವರ್ಣಾಶ್ರಮ ವ್ಯವಸ್ಥೆಯನ್ನು ಮತ್ತು ಧರ್ಮವನ್ನು ಒಪ್ಪಿಕೊಂಡಿರಲಿಲ್ಲ ಎಂದು ತಿಳಿಯುವುದಕ್ಕೆ ಸಾಕಷ್ಟು ಆಧಾರಗಳಿವೆ. ಮೊದಲನೆಯದಾಗಿ, ಚಾರ್ವಾಕರು ವೇದ ಪ್ರಾಮಾಣ್ಯವನ್ನೇ ಒಪ್ಪಿಕೊಂಡಿರಲಿಲ್ಲ. ಹೀಗಾಗಿ ವರ್ಣಾಶ್ರಮ ವ್ಯವಸ್ಥೆಯು ವೇದ ಪ್ರಣೀತವಾದುದೆಂಬ ಕಾರಣಕ್ಕಾಗಿ ಅದನ್ನು ಒಪ್ಪಿಕೊಳ್ಳುವ ಪ್ರಮೇಯವೇ ಚಾರ್ವಾಕರಿಗೆ (ವೈದಿಕ ಸಿದ್ಧಾಂತಗಳಿದ್ದಂತೆ) ಇರಲಿಲ್ಲ. ಬೃಹಸ್ಪತಿ ಸೂತ್ರದಲ್ಲಿ ಉಕ್ತವಾಗಿವೆ[10] ಎಂದು ಹೇಳಲಾದ ಈ ಕೆಳಗಿನ ಹೇಳಿಕೆಗಳು ಚಾರ್ವಾಕರಿಗೆ ವರ್ಣಾಶ್ರಮ ಧರ್ಮದಲ್ಲಿ ವಿಶ್ವಾಸವಿರಲಿಲ್ಲ ಅನ್ನುವುದನ್ನು ಸ್ಪಷ್ಟವಾಗಿ ತಿಳಿಸುತ್ತವೆ:

೧) ಚತುರ್ವರ್ಣಗಳ ಮತ್ತು ಚತುರಾಶ್ರಮಗಳು ಕ್ರಿಯಾಕರ್ಮಗಳು ಯಾವ ನಿಜವಾದ ಫಲವನ್ನೂ ಕೊಡುವುದಿಲ್ಲ.

೨) ಅಗ್ನಿಹೋತ್ರ, ಮೂರು[11] ವೇದಗಳು, ಸನ್ಯಾಸಿಯ ತ್ರಿಕಾಷ್ಠ, ಭಸ್ಮಲೇಪನ ಮುಂತಾದವುಗಳು ಜ್ಞಾನ ಹಾಗೂ ಪೌರುಷ ಇಲ್ಲದವರ ಜೀವನ ನಿರ್ವಹಣಕ್ಕಾಗಿ ಪ್ರಕೃತಿಯು ಯೋಜಿಸಿದ ಉಪಾಯಗಳಾಗಿವೆ.

೩) ಜ್ಯೋತಿಷ್ಟೋಮ ಯಜ್ಞದಲ್ಲಿ ಬಲಿ ಕೊಡಲ್ಪಟ್ಟ ಪಶುವು ಸ್ವರ್ಗಕ್ಕೆ ಹೋಗುವುದು ನಿಜವಾಗಿದ್ದ ಪಕ್ಷದಲ್ಲಿ ಬಲಿ ಕೊಡುವವನು ಈ ಕೂಡಲೇ ತನ್ನ ಸ್ವಂತ ತಂದೆಯನ್ನೇ ಬಲಿಕೊಟ್ಟು ಅವನನ್ನು ಸ್ವರ್ಗಕ್ಕೆ ಯಾಕೆ ಏರಿಸಬಾರದು ?

೪) ಶ್ರಾದ್ಧದಲ್ಲಿ ಸಂತರ್ಪಣೆ ಮಾಡುವುದರಿಂದ ಸತ್ತು ಸ್ವರ್ಗಸೇರಿದವರಿಗೆ ಸಂತೃಪ್ತಿ ಉಂಟಾಗುವುದು ನಿಜವಾಗಿದ್ದ ಪಕ್ಷದಲ್ಲಿ ಇಲ್ಲಿ ಈಗ ಜೀವಂತವಾಗಿರುವ

---

9. ಈ ವಿಷಯದಲ್ಲಿ ಹೆಚ್ಚಿನ ಮಾಹಿತಿಯನ್ನು ಮತ್ತು ವಿವರಣೆಯನ್ನು ನಾವು ಪ್ರೊ. ದೇವೀಪ್ರಸಾದ ಚಟ್ಟೋಪಾಧ್ಯಾಯರ 'Lokayata' A study in Ancient Indian Materialism' (People's Publishing House, New Delhi, 1959) ಎಂಬ ಗ್ರಂಥದಿಂದ ಪಡೆಯಬಹುದು. ಆದರೆ ಆ ಗ್ರಂಥದಲ್ಲಿ ಕೊಡಲಾದ ಎಲ್ಲಾ ಮಾಹಿತಿಗಳು ಮತ್ತು ವಿವರಣೆಗಳು ಐತಿಹಾಸಿಕವಾಗಿ ಸಮಾನ ರೀತಿಯಲ್ಲಿ ಪ್ರಮಾಣ ಭೂತವಾದಂಥವು ಎಂದು ಪರಿಗಣಿಸುವುದು ಸಾಧ್ಯವಿಲ್ಲ.

10. ನೋಡಿ: ಮಾಧವಾಚಾರ್ಯ : ಸರ್ವದರ್ಶನ ಸಂಗ್ರಹ, ಪ್ರಕರಣ : ೧, ಅಂತ್ಯಭಾಗ,

11. ಪಾಶ್ಚಾತ್ಯ ವಿದ್ವಾಂಸರು 'ಬೃಹಸ್ಪತಿ ಸೂತ್ರ' ವು ಕ್ರಿ. ಪೂ. ಸುಮಾರು ೬೦೦ರಲ್ಲಿ ರಚಿತವಾಗಿರಬಹುದೆಂದು ಅಭಿಪ್ರಾಯ ಪಡುತ್ತಾರೆ. ಆದರೆ ಇಲ್ಲಿ 'ಮೂರು ವೇದಗಳು' ಎಂದು ಅಂದಿರುವುದರಿಂದ ನಾಲ್ಕನೆಯ ವೇದವಾದ ಅಥರ್ವವೇದವು ರಚಿತವಾದ ಕಾಲಕ್ಕಿಂತ ಮುಂಚಿತವಾಗಿಯೇ ಈ ಸೂತ್ರವು ರಚಿಸಲ್ಪಟ್ಟಿರಬಹುದು ಎಂದು ತಿಳಿಯುವುದಕ್ಕೆ ಅವಕಾಶವಿದೆ.

ಜನರಿಗೆ ಕೂಡ ಅವರು ಬೇರೆ ಊರಿಗೆ ಪ್ರಯಾಣ ಹೊರಡುನಾಗ ದಾರಿ-ಬುತ್ತಿ. ಇಲ್ಲವೆ ಸೀದಾ ಪದಾರ್ಥಗಳನ್ನು ಕೊಟ್ಟು ಕಳಿಸುವುದು ಅವಶ್ಯವೆನಿಸಬಾರದು. ಆ[illegible] ರಿಂದ ಶ್ರಾದ್ಧ ಮುಂತಾದ ಕ್ರಿಯಾಕರ್ಮಗಳನ್ನು ಬ್ರಾಹ್ಮಣರು ಕೇವಲ ತಮ್ಮ ಉದರಂಭರಣಕ್ಕೋಸ್ಕರ ಸ್ಥಾಪಿಸಿರುವರೇ ಹೊರತು ಅವುಗಳಿಂದ ಬೇರೆ ಯಾವ ಫಲ ಪ್ರಾಪ್ತಿಯೂ ಇಲ್ಲ.[12]

**ಉಪಸಂಹಾರ :**

ಈ ಲೇಖನದುದ್ದಕ್ಕೂ ಚಾರ್ವಾಕ ಮತದ ಗುಣವಿಶೇಷಗಳನ್ನೇ ವಿಸ್ತಾರವಾಗಿ ಪ್ರಸ್ತಾಪಿಸಿರುವುದನ್ನು ಹಾಗೂ ಚರ್ಚಿಸಿರುವುದನ್ನು ವಾಚಕರು ಕಾಣಬಹುದಾಗಿದೆಯೇ ವಿನಾ ಈ ಮತದ ದೋಷಗಳನ್ನು ಕುರಿತು ಪ್ರಸ್ತಾಪ ಮತ್ತು ಚರ್ಚೆಗಳನ್ನೆಲ್ಲ ನಾನಿಲ್ಲಿ ಚಾರ್ವಾಕ ಮತದ ದೋಷಗಳನ್ನು ಕುರಿತು ಪ್ರಸ್ತಾಪಿಸದೇ ಇದ್ದುದಕ್ಕೆ ಹಾಗೂ ಅವುಗಳನ್ನು ಚರ್ಚಿಸದೇ ಇದ್ದುದಕ್ಕೆ ಮುಖ್ಯ ಕಾರಣಗಳು ಎರಡು: ಒಂದನೆಯ ಕಾರಣವೆಂದರೆ, ಭಾರತದ ಇನ್ನಿತರ ಎಲ್ಲಾ ದರ್ಶನಗಳು ಗ್ರಂಥದಲ್ಲಿ ಚಾರ್ವಾಕ ಮತದ ದೋಷಗಳ-ಮತ್ತು ಕೇವಲ ಅದರ ದೋಷಗಳ-ಚರ್ಚೆಯು ವಿಪುಲವಾಗಿ ಕಂಡುಬರುತ್ತದೆ.[13] ಹೀಗಾಗಿ ಈಗ ಹೆಚ್ಚು ಅವಶ್ಯಕವಾಗಿರುವುದು ಚಾರ್ವಾಕ ಮತದ ಗುಣಗಳ ಚರ್ಚೆಯೇ ಹೊರತು ಅದರ ಅವಗುಣಗಳ ಅಥವಾ ದೋಷಗಳ ಚರ್ಚೆಯಲ್ಲ. ಎರಡನೆಯದು ಸ್ಥಳಾಭಾವದ್ದು.

## ಗ್ರಂಥ-ಸೂಚಿ


(ಸಂಸ್ಕೃತ ಭಾಷೆಯಲ್ಲಿ)

೧. ಋಗ್ವೇದ :೧, ೨, ೩ ಮತ್ತು ೧೦ನೆಯ ಮಂಡಲಗಳು.
೨. ಛಾಂದೋಗ್ಯ ಉಪನಿಷತ್ : ಅಧ್ಯಾಯ ೮.
೩. ಮೈತ್ರೀ ಉಪನಿಷತ್ : ಅಧ್ಯಾಯ ೭.
೪. ಬೃಹದಾರಣ್ಯಕೋಪನಿಷತ್ : ಶಾಂಕರಭಾಷ್ಯ, ೫೫೨.
೫. ಶ್ವೇತಾಶ್ವತರ ಉಪನಿಷತ್ : ಅಧ್ಯಾಯಗಳು ೧ ಮತ್ತು ೬.
೬. ವೇದಾಂತ ಸೂತ್ರಗಳು : ಶಾಂಕಭಾಷ್ಯ, ೩:೩,೫೩-೪.


12. ಮಾಧವಾಚಾರ್ಯ : ಸರ್ವದರ್ಶನ ಸಂಗ್ರಹ. ಪ್ರಕರಣ : ೧. ಅಂತ್ಯಭಾಗ.
13. ಚಾರ್ವಾಕ ಮತದ ಪ್ರಮಾಣ-ಸಿದ್ಧಾಂತ, ಅಸ್ತಿತ್ವತತ್ವ-ಸಿದ್ಧಾಂತ, ಮತ್ತು ನೀತಿ-ಸಿದ್ಧಾಂತ ಇವುಗಳಲ್ಲಿನ ದೋಷಗಳ ಮತ್ತು ನ್ಯೂನತೆಗಳ ಚರ್ಚೆಗಾಗಿ ವಿಭಿನ್ನ ಬೌದ್ಧ, ಜೈನ, ನ್ಯಾಯ, ಮೀಮಾಂಸ ಮತ್ತು ವೇದಾಂತ ದರ್ಶನಗಳ ಗ್ರಂಥಗಳನ್ನು ಅವಲೋಕಿಸಬಹುದು.




೭ ಮಹಾಭಾರತ : ಶಲ್ಯಪರ್ವ, ಶಾಂತಿಪರ್ವ.
೮. ವಿಷ್ಣು ಪುರಾಣ.
೯. ಮನುಸ್ಮೃತಿ.
೧೦. ವಾತ್ಸ್ಯಾಯನ-ಕಾಮಸೂತ್ರ : ಪ್ರಕರಣಗಳು ೧ ಮತು ೨.
೧೧. ಜಯರಾಶಿಭಟ್ಟ : ತತ್ವೋಪಪ್ಲವಸಿಂಹ (ಗಾಯಕವಾಡ್ ಓರಿಯಂಟಲ್ ಸೀರೀಜ್, ಬಡೋದಾ).
೧೨. ಶಂಕರಾಚಾರ್ಯ : ಸರ್ವಸಿದ್ಧಾಂತಸಾರಸಂಗ್ರಹ.
೧೩. ಮಾಧವಾಚಾರ್ಯ : ಸರ್ವದರ್ಶನಸಂಗ್ರಹ.
೧೪. ಜಯಂತಭಟ್ಟ : ನ್ಯಾಯಮಂಜರೀ (ವಿಜಯನಗರಂ ಸೀರೀಜ್).
೧೫. ಗುಣರತ್ನ : ತರ್ಕರಹಸ್ಯದೀಪಿಕಾ.
೧೬. ಶ್ರೀಹರ್ಷ : ನೈಷಧೀಯ ಚರಿತ.
೧೭. ಕೃಷ್ಣಮಿಶ್ರ : ಪ್ರಬೋಧಚಂದ್ರೋದಯ.
೧೮. ವೇದಾಂತಸೂತ್ರಗಳು : ಭಾಸ್ಕರಭಾಷ್ಯ, ೩ : ೩ ೫೩.
೧೯. ವಾಚಸ್ಪತಿಮಿಶ್ರ ಭಾಮತೀ : ೨ : ೧, ೧೪, ೩ : ೩, ೫೩.
೨೦. ದಕ್ಷಿಣಾರಂಜನಶಾಸ್ತ್ರಿ : ಚಾರ್ವಾಕಷಷ್ಟಿ (ಬುಕ್ ಕಂಪನಿ ಕಲ್ಕತ್ತಾ).

(ಇಂಗ್ಲಿಷ್ ಭಾಷೆಯಲ್ಲಿ)

1. Chatterjee, S. & Datta' An Introduction to Indian Philosophy (University of Caclutta), 6th Edition, 1960.
2. Dakshinaranjan Shastri : A Short History of Indian Materialism (Book Company, Calcutta).

# ಪುರಾಣ ಮುನಿಗಳು–6

## ವಾಲ್ಮೀಕಿ

—ಪ. ರಾಮಕೃಷ್ಣಶಾಸ್ತ್ರಿ

ಬ್ರಹ್ಮದೇವನ ಮಾನಸ ಪುತ್ರರಲ್ಲಿ ಪ್ರಚೇತನನೂ ಒಬ್ಬ. ಪ್ರಚೇತನನ ಹತ್ತು ಮಂದಿ ಗಂಡು ಮಕ್ಕಳಲ್ಲಿ ವಾಲ್ಮೀಕಿಯೂ ಒಬ್ಬನೆಂದು ಆಧ್ಯಾತ್ಮ ರಾಮಾಯಣದಲ್ಲಿದೆ. ವಾಲ್ಮೀಕಿಯು ಸುಮತಿಯೆಂಬ ಬ್ರಾಹ್ಮಣನ ಮಗನೆಂದು ಸ್ಕಾಂಧ ಪುರಾಣದಲ್ಲಿಯೂ ಭೃಗು ಋಷಿಯ ಸಹೋದರನೆಂದು ವಿಷ್ಣು ಪುರಾಣದಲ್ಲಿಯೂ ಭಾರ್ಗವಶ್ರೇಷ್ಠನೆಂದು ಮತ್ಸ್ಯ ಪುರಾಣದಲ್ಲಿಯೂ ಉಕ್ತವಾಗಿದೆ. ಆತ ಚರ್ಷಣಿ ಎಂಬಾಕೆಯಿಂದ ವರುಣನಿಗೆ ಜನಿಸಿದ ಎನ್ನುತ್ತದೆ ಭಾಗವತ.

ಪ್ರಚೇತನನ ಮಗನಾದ ವಾಲ್ಮೀಕಿಯು ಗುರುಕುಲದಲ್ಲಿ ಅಭ್ಯಾಸ ಮಾಡುತ್ತಿದ್ದಾಗ ಗುರುವಿನೊಂದಿಗೆ ಮೇಲಿಂದ ಮೇಲೆ ಪ್ರಶ್ನೆಗಳನ್ನು ಕೇಳಲಾರಂಭಿಸಿದ. ಅವನ ಅಧಿಕ ಪ್ರಸಂಗದಿಂದ ಗುರುವಿಗೆ ಸಿಟ್ಟು ಬಂದು, "ನೀನು ಕರ್ಮಭ್ರಷ್ಟನಾಗಿ ಹೋಗು" ಎಂದು ಶಪಿಸಿದ. ಆಗ ವಾಲ್ಮೀಕಿಯು ಗುರುವಿನ ಕಾಲುಗಳಿಗೆರಗಿ, "ನನ್ನ ಅಪರಾಧವನ್ನು ಮನ್ನಿಸಿ ಉದ್ಧರಿಸುವವರಾಗಿ" ಎಂದು ಬಹು ಪರಿಯಿಂದ ಕೇಳಿಕೊಂಡ. ಗುರುವಿಗೆ ದಯೆ ಬಂತು. "ಒಂದು ಸಲ ನನ್ನ ಶಾಪವನ್ನು ನೀನು ಅನುಭವಿಸದೆ ವಿಧಿಯಿಲ್ಲ. ಮುಂದೆ ಕಾಲಾಂತರದಲ್ಲಿ ಸಪ್ತರ್ಷಿಗಳು ನಿನ್ನ ಉದ್ಧಾರದ ದಾರಿ ತೋರಿಸಿಕೊಡುತ್ತಾರೆ" ಎಂದು ಹೇಳಿದ. ಪ್ರಚೇತನ ಕುಮಾರ ಕಾಡು ಸೇರಿ ತನ್ನ ಆ ಜನ್ಮವನ್ನು ನೀಗಿಕೊಂಡ. ಅವನ ಜೀವಾತ್ಮವು ಕಾಡಿನಲ್ಲಿ ತಪೋಮಗ್ನನಾದ ಕಣು ಎಂಬ ತರುಣ ತಪಸ್ವಿಯ ದೇಹವನ್ನು ಹೊಕ್ಕಿತು.

ಸಕಲ ವೇದಶಾಸ್ತ್ರಗಳಲ್ಲಿ ನಿಪುಣನಾದ ಆ ತರುಣ ಬ್ರಾಹ್ಮಣನು ಅಖಂಡ ತಪಸ್ಸಿದ್ಧಿಯಿಂದ ಬ್ರಹ್ಮರ್ಷಿ ಎಂಬ ಗೌರವಕ್ಕೆ ಪಾತ್ರನಾದನು. ಒಂದು ಸಲ ಅವನ ದರ್ಶನಕ್ಕೆ ಬೇಡರ ತರುಣಿಯೊಬ್ಬಳು ಬಂದಳು. ಹೆಂಡತಿಯನ್ನು ಬಹುಕಾಲದಿಂದ ಮನೆಯಲ್ಲೇ ಬಿಟ್ಟು ಬಂದಿದ್ದ ಅವನಿಗೆ ಅವಳನ್ನು ನೋಡುತ್ತಲೇ ಮೋಹಪರವಶತೆಯುಂಟಾಯಿತು. ಆದರಿಂದಾಗಿ ದಿವ್ಯಶಕ್ತಿಯೊಂದು ಅವನ ದೇಹದಿಂದ ಕೆಳಗೆ ಕಳಚಿಬಿದ್ದಿತು. ಆ ಮಹಾಶಕ್ತಿ ಹಾಳಾಗಬಾರದೆಂದು ಅದು ಕೆಳಗೆ ಬೀಳುವ ಮೊದಲೇ ತರುಣಿಯು ತನ್ನ ಬೊಗಸೆಯಲ್ಲಿ ಅದನ್ನು ಹಿಡಿದು ಪ್ರಾಶನ ಮಾಡಿದಳು.



ಆದರಿಂದಾಗಿ ಅವಳು ಗರ್ಭ ಧರಿಸಿ ಗಂಡು ಮಗುವೊಂದನ್ನು ಹಡೆದಳು. ಆ ಮಗುವಿನ ರೂಪದಲ್ಲಿ ಪ್ರಚೇತನ ಕುಮಾರನೇ ಜನಿಸಿದ್ದರೂ ಕಿರಾತಳ ಉದರದಲ್ಲಿ ಜನಿಸಿದುದರಿಂದ ದುಷ್ಟನೂ ನಿರ್ದಯಿಯೂ ಶಕ್ತಿಶಾಲಿಯೂ ಆಗಿ ಬೆಳೆದ. ಅವನಿಗೆ ಕಿರಾತ ಕನ್ನೆಯೊಬ್ಬಳನ್ನು ಮದುವೆಯಾಗಿ ಹಲವು ಮಂದಿ ಗಂಡುಮಕ್ಕಳೂ ಹುಟ್ಟಿದರು. ಸಂಸಾರವನ್ನು ಪೋಷಿಸಲು ಕಳವು, ಸುಲಿಗೆ, ದರೋಡೆಗಳನ್ನು ಆರಂಭಿಸಿದ. ನಿರಪರಾಧಿ ದಾರಿಹೋಕರನ್ನು ಕೊಂದು ಹಣವನ್ನು ತಂದು ಪತ್ನಿ ಪುತ್ರರಿಗೆ ಕೊಡುತ್ತಿದ್ದ.

ಹೀಗೆ ದಾರಿಹೋಕರನ್ನು ಸುಲಿಯಲು ಅವನು ಆಯುಧಗಳೊಂದಿಗೆ ಕುಳಿತಿದ್ದಾಗ ಸಪ್ತಋಷಿಗಳು ಆ ದಾರಿಯಾಗಿ ಬಂದರು. ಅವನು ಅವರನ್ನು ಕೊಲ್ಲಲೆಂದು ಅವರ ಮೇಲೆರಗಿದ. ಆಗ ಋಷಿಗಳು, "ಅಯ್ಯಾ ನಮ್ಮಲ್ಲಿ ಏನಿದೆ ಎಂದು ನಮಗೆ ಬಾಧೆ ಕೊಡುತ್ತಿದ್ದೀಯಾ? ನಮ್ಮಲ್ಲಿ ತಪೋಬಲದ ಹೊರತು ಬೇರೇನೂ ಇಲ್ಲ" ಎಂದರು.

"ನಿಮ್ಮಲ್ಲಿ ಏನಿದೆಯೋ ಅದನ್ನೆ ಕೊಡಿ" ಎಂದು ಕಿರಾತ ಗರ್ಜಿಸಿದ.

"ಕೊಡುತ್ತೇವೆ. ಆದರೆ ನಿನ್ನಲ್ಲಿ ಒಂದು ಪ್ರಶ್ನೆ ಕೇಳುತ್ತೇವೆ. ನಿನಗೆ ಏನು ಸಿಕ್ಕಿದರೂ ಅದರಿಂದ ಏನು ಉಪಯೋಗ ಮಾಡಿಕೊಳ್ಳುತ್ತಿ?" ಎಂದು ಕೇಳಿದರು ಋಷಿಗಳು. "ಅದರಿಂದ ನನ್ನ ಹೆಂಡತಿ ಮಕ್ಕಳನ್ನು ಪೋಷಿಸುತ್ತೇನೆ" ಎಂದ ಕಿರಾತ.

"ಸರಿ ಅದಕ್ಕಾಗಿ ನೀನು ಎಷ್ಟೋ ಕೊಲೆ ಸುಲಿಗೆಗಳನ್ನು ಮಾಡಿ ಎಂಥ ಪಾಪವನ್ನು ಗಳಿಸಿರುವೆ ಎಂಬುದನ್ನು ಬಲ್ಲೆಯಾ? ಸತ್ತಮೇಲೆ ಈ ಪಾಪಕ್ಕಾಗಿ ನೀನು ಘೋರ ನರಕವನ್ನು ಅನುಭವಿಸಬೇಕಾಗಿದೆ. ನಿನ್ನ ಹಣವನ್ನು ಸ್ವೀಕರಿಸಿದಂತೆಯೆ ಹೆಂಡತಿ ಮಕ್ಕಳು ಈ ಪಾಪದಲ್ಲಿಯೂ ಪಾಲು ಸ್ವೀಕರಿಸುತ್ತಾರೆಯೇ ಅಥವಾ ನೀನೊಬ್ಬನೇ ಅನುಭವಿಸಬೇಕೇ ಎಂಬುದನ್ನು ಅವರಲ್ಲಿ ಕೇಳಿ ಬಾ" ಎಂದರು ಋಷಿಗಳು.

ಕಿರಾತ ಕೂಡಲೇ ಮನೆಗೆ ಓಡಿ ಹೆಂಡತಿ ಮಕ್ಕಳೊಂದಿಗೆ ಈ ಪ್ರಶ್ನೆಯನ್ನು ಕೇಳಿದಾಗ ಅವರು, "ಪಾಪವನ್ನು ನಾವು ಅನುಭವಿಸಲು ಸಿದ್ಧರಿಲ್ಲ" ಎಂದರು.

ಅದನ್ನು ಕೇಳಿ ಚಿಂತೆಯಿಂದ ಕಿರಾತ ಋಷಿಗಳ ಸನ್ನಿಧಿಗೆ ಹಿಂತಿರುಗಿ, "ನಾನು ಯಾರಿಗಾಗಿ ಪಾಪ ಮಾಡಿ ಹಣ ಸಂಪಾದಿಸಿದ್ದೇನೋ ಅವರಿಗೆ ಪಾಪವು ಬೇಡವಂತೆ. ಪೂಜ್ಯರೇ ನನ್ನನ್ನು ಉದ್ಧಾರ ಮಾಡಿ" ಎಂದು ಪ್ರಾರ್ಥಿಸಿದ.

ಸಪ್ತರ್ಷಿಗಳು ಅವನ ಮೇಲೆ ಮಂತ್ರಜಲವನ್ನು ಸಂಪ್ರೋಕ್ಷಿಸಿ, "ಅಯ್ಯಾ ನಿನ್ನನ್ನು ನಾವು ಉದ್ಧರಿಸುತ್ತೇವೆ. ಅದೋ ಆ ಸ್ಥಳದಲ್ಲಿ ಕುಳಿತುಕೋ, ನಾವು ಎಂದಾದರೂ ಒಂದು ದಿನ ಇಲ್ಲಿಗೆ ಮರಳಿ ಬರುತ್ತೇವೆ. ಅದುವರೆಗೂ ರಾಮ ರಾಮ ಎಂಬ ಮಂತ್ರವನ್ನು ಜಪಿಸಿಕೊಂಡೇ ಇರಬೇಕು" ಎಂದರು.

"ನೀವು ಉಪದೇಶಿಸಿದ ಮಂತ್ರ ನನ್ನ ನಾಲಿಗೆಯಲ್ಲಿ ಬರುವುದಿಲ್ಲ" ಎಂದನು ಕಿರಾತ. "ಹಾಗಾದರೆ ಅದೇನು ?" ಎಂದು ಋಷಿಗಳು ಒಂದು ಮರವನ್ನು ಅವನಿಗೆ ತೋರಿಸಿದಾಗ "ಅದು ಮರ" ಎಂದ ಆತ.

"ಸರಿ ಮರ ಮರ ಎಂದು ಜಪಿಸಿಕೊಂಡೇ ಇರು" ಎಂದರು ಸಪ್ತರ್ಷಿಗಳು.

ಕಿರಾತ ರಾಮಧ್ಯಾನ ತತ್ಪರನಾಗಿ ಮೈಮರೆತು ಕುಳಿತ. ಅವನ ಮೈಮೇಲೆ ಒಂದು ಹುತ್ತವು ಬೆಳೆಯಿತು. ಸಪ್ತರ್ಷಿಗಳಿಗೆ ಈ ಘಟನೆಯ ನೆನಪೇ ಇರಲಿಲ್ಲ. ಹಲವು ವರ್ಷಗಳ ಮೇಲೆ ಆ ದಾರಿಯಾಗಿ ಬಂದಾಗ ಹುತ್ತದಲ್ಲಿ ಎರಡು ಕಣ್ಣುಗಳು ಉಜ್ವಲವಾಗಿ ಹೊಳೆಯುತ್ತಿರುವುದನ್ನು ನೋಡಿದರು. ರಾಮಮಂತ್ರ ಮಾರ್ಮೊಳಗುತ್ತಿರುವುದನ್ನು ಕೇಳಿದರು. ಆಗ ನಡೆದ ಘಟನೆ ಅವರಿಗೆ ನೆನಪಿಗೆ ಬಂತು. ಕಮಂಡಲದ ಪುಣ್ಯ ಜಲವನ್ನು ಹುತ್ತಕ್ಕೆ ಸಂಪ್ರೋಕ್ಷಿಸಿದರು. ಹುತ್ತವು ಕರಗಿತು, ರಾಮಮಂತ್ರದಿಂದ ಪಾವನನಾದ ಪಾಪಿ ಕಿರಾತನು ಎದ್ದು ನಿಂತ. ವಲ್ಮೀಕ (ಹುತ್ತ) ದೊಳಗಿಂದ ಪುನರುಜ್ಜೀವಿತನಾದ ಅವನಿಗೆ ವಾಲ್ಮೀಕಿ ಎಂದು ಹೆಸರಾಯಿತು.

ಪುನೀತನಾದ ವಾಲ್ಮೀಕಿ ಬ್ರಹ್ಮರ್ಷಿಯಾದ. ಸಕಲ ಲೋಕಗಳಲ್ಲಿ ನಡೆಯುತ್ತಿರುವಂಥ ವಿದ್ಯಮಾನಗಳನ್ನೆಲ್ಲ ತಿಳಿಯಬಲ್ಲ ತ್ರಿಕಾಲಜ್ಞಾನಿಯಾದನು. ಅವನಿಗೆ ರಾಮಾಯಣದ ಕತೆಯನ್ನು ನಾರದನು ಹೇಳಿದ ಪ್ರಕಾರ ಅವನು ವಿಸ್ತಾರವಾಗಿ ಬರೆದನು.

ಒಂದು ದಿನ ವಾಲ್ಮೀಕಿ ತಮಸಾ ನದಿಗೆ ಸ್ನಾನಕ್ಕಾಗಿ ಹೋಗಿದ್ದಾಗ ಪ್ರಣಯ ವಿಹಾರ ನಡೆಸಿದ್ದ ಕ್ರೌಂಚ ಪಕ್ಷಿಗಳ ಜೋಡಿಯೊಂದಕ್ಕೆ ಒಬ್ಬ ವ್ಯಾಧನು ಬಾಣ ಹೊಡೆದು ಗಂಡು ಹಕ್ಕಿಯನ್ನು ಉರುಳಿಸಿದ. ಪತಿ ವಿಯೋಗವನ್ನು ಸಹಿಸಲಾರದೆ ಹೆಣ್ಣು ಹಕ್ಕಿಯು ನೆಲದಲ್ಲಿ ಬಿದ್ದು ಹೊರಳಾಡಲಾರಂಭಿಸಿತು. ಅದನ್ನು ನೋಡಿದ ವಾಲ್ಮೀಕಿಗೆ ದುಃಖ ಉಕ್ಕಿ ಬಂದು, ನವೀನವೂ ಸುಂದರವೂ ಆದ ಛಂದೋರೂಪದ ಶ್ಲೋಕವೊಂದನ್ನು ಶಾಪರೂಪದಲ್ಲಿ ಪಠಿಸಿದ: "ಬೇಡನೆ, ಸುಂದರವಾದ ಈ ಜೋಡಿ ಹಕ್ಕಿಗಳಲ್ಲಿ ಒಂದನ್ನು ಕೊಂದ ಮಹಾಪಾಪಿ ನೀನು ಬಹಳಕಾಲ ನೀನು ಸುಖದಿಂದಿರಲಾರೆ".



ದೈವಕೃಪೆಯಿಂದ ರಾಮಾಯಣ ಮಹಾಕಾವ್ಯದ ಅರ್ಥವೆಲ್ಲವೂ ಆ ಶ್ಲೋಕದಲ್ಲಿ ಅಂತರ್ಗತವಾಗಿತ್ತು. ಬ್ರಹ್ಮನು ಅವನೆದುರು ಕಾಣಿಸಿಕೊಂಡು, "ಸರಸ್ವತಿಯ ಕೃಪೆಯಿಂದ ನೀನು ವಾಕ್ಸಿದ್ಧಿಯನ್ನು ಪಡೆದು ಶಬ್ದಬ್ರಹ್ಮನಲ್ಲಿ ಪ್ರಬುದ್ಧನಾದೆ. ಪುಣ್ಯಕರವಾದ ರಾಮನ ಕತೆಯನ್ನು ಈ ಶ್ಲೋಕ ವೃತ್ತದಲ್ಲಿ 24 ಸಾವಿರ ಶ್ಲೋಕಗಳಲ್ಲಿ ಪೂರ್ಣಗೊಳಿಸು" ಎಂದು ಆದೇಶಿಸಿದ.

ಸೀತಾಲಕ್ಷ್ಮಣರೊಂದಿಗೆ ರಾಮನು ಕಾನನವಾಸ ಕೈಗೊಂಡಿದ್ದಾಗ ವಾಲ್ಮೀಕಿ ಅವರನ್ನು ಸತ್ಕರಿಸುತ್ತಾನೆ. ಮುಂದೆ ಅಗಸನ ಮಾತಿಗೆ ನೊಂದು ರಾಮನು ಸೀತೆಯನ್ನು ಕಾಡುಪಾಲು ಮಾಡಿದಾಗ ಸೀತೆಗೆ ಆಶ್ರಯವಿತ್ತದ್ದು ವಾಲ್ಮೀಕಿ. ಲವ-ಕುಶರು ಅವನ ಆಶ್ರಮದಲ್ಲೇ ಜನಿಸಿದರು. ಲವ-ಕುಶರಿಗೆ ರಾಮಾಯಣವನ್ನು ಕಲಿಸಿಕೊಟ್ಟು ರಾಮನ ಸಮ್ಮುಖದಲ್ಲಿ ಅದನ್ನು ಅವರಿಂದ ಹಾಡಿಸಿ, ಸೀತೆಗಾಗಿ ಪರಿತಪಿಸಿದ ರಾಮನ ಬಳಿಗೆ ಅವಳನ್ನು ವಾಲ್ಮೀಕಿ ಕರೆತರುತ್ತಾನೆ. ಅಲ್ಲಿಗೆ ಸೀತೆಯ ಭೂ ಪ್ರವೇಶವಾಗುತ್ತದೆ. ಅನಂತರ ವಾಲ್ಮೀಕಿಯ ಪ್ರಸ್ತಾಪ ಸಿಗುವುದಿಲ್ಲ.

ಬ್ರಹ್ಮಹತ್ಯಾ ಪಾಪಕ್ಕೆ ಗುರಿಯಾದ ವಾಲ್ಮೀಕಿ ತಪಸ್ಸಿನಿಂದ ಶಿವನನ್ನು ಒಲಿಸಿಕೊಂಡು, ಆ ಪಾಪದಿಂದ ವಿಮೋಚನೆ ಹೊಂದಿದನೆಂದು ಮಹಾಭಾರತ, ಸ್ಕಾಂಧ ಪುರಾಣಗಳಲ್ಲಿ ಹೇಳಿದೆ.

# " ಮಹಾಲಿಂಗವೃಕ್ಷ "

[" ಕನ್ನಡ ಕವಿ ಕಾಳಿದಾಸ " ಕೃತ " ದಿವ್ಯಜೀವನ ಪಥದಲ್ಲಿ " ಅಪ್ರಕಟಿತ ಗ್ರಂಥದಿಂದ ಉದ್ಧರಿಸಲಾದೆ.]

---

—ಶ್ರೀ ಮೋಟಗಿ ಮಲ್ಲಿಕಾರ್ಜುನ " ಕನ್ನಡ ಕವಿ ಕಾಳಿದಾಸ " ಅಥಣಿ.

## ರಹಸ್ಯಸ್ಫೋಟ

ಈ ಮೊದಲು ನಾನು ಸೊಲ್ಲಾಪುರಕ್ಕೆ ಹೋಗಿದ್ದೆ. ಅಲ್ಲಿ ದಿ: 15-2-1975 ರಂದು ಮುಂಜಾನೆ ಸುಮಾರು 11ಗಂಟೆಯ ವೇಳೆಗೆ ಆತ್ಮಿಯಗೆಳೆಯ ಶ್ರೀರಾಜಶೇಖರ ಮಡಕಿಯವರನ್ನು ಭೇಟಿಮಾಡಿದೆ. ಅವರೊಂದು " ಗುರು ಪ್ರಸಾದ " ಗ್ರಂಥವನ್ನು ನನಗೆ ಪ್ರೀತಿಯ ಕಾಣಿಕೆಯಾಗಿ ನೀಡಿದರು. ಈ ಗ್ರಂಥರತ್ನ ಯೋಗಿರಾಜ ಶ್ರೀ ನವಕಲ್ಯಾಣಮಠ ಕುಮಾರಸ್ವಾಮೀಜಿಯವರ ಮಹಿಮೆಯ ಪ್ರತೀಕವಾಗಿತ್ತು. ಅದರ ಮುಖಪತ್ರ-ಯೋಗಿರಾಜರ ಭಾವಚಿತ್ರ ಭಾವಪೂರಿತವಾಗಿ ಬಿಳಿಯ ಮತ್ತು ಗುಲಾಬಿ ಹಳದಿ ಬಣ್ಣಗಳ ತ್ರಿವರ್ಣದಿಂದ ಬಹು ಮನೋಹರವಾಗಿತ್ತು ಭಕ್ತಿ-ಜ್ಞಾನ ವೈರಾಗ್ಯಗಳನ್ನು ಚೆನ್ನಾಗಿ ಪ್ರದರ್ಶಿಸುತ್ತಿತ್ತು. ಆ ಗ್ರಂಥದಲ್ಲಿ ಯೋಗಿರಾಜರ ಬಗೆಗೆ ಬಂದ ಅನುಭವಗಳನ್ನು ಬರೆಯಲಾಗಿದೆ. ಅರವತ್ತು ಮೂವರು ಪುರಾತನರ ಸಂಕೇತವೆಂಬಂತೆ, ದೇಶ ವಿದೇಶಗಳ ಅರವತ್ತುಮೂರು ಮಂದಿ ಭಕ್ತರ ಅನುಭವೋಕ್ತಿಗಳು ಅದರಲ್ಲಿ ಅಡಕವಾಗಿವೆ. ಉಕ್ತಿಗಳು ವಾಚಕರಿಗೆ ಅಮೃತಸೇಚನ ಮಾಡುತ್ತಿವೆ.

ಈ ಅರವತ್ತು ಮೂವರಲ್ಲಿ ಒಬ್ಬರಾದ ಶ್ರೀರಾಜಶೇಖರ ಮಡಕಿಯವರೂ ತಮಗಾದ ಅನುಭವದ ವಿಷಯಗಳನ್ನು ವಿಶದವಾಗಿ ಆ ಗ್ರಂಥದಲ್ಲಿ ವಿವರಿಸಿದ್ದಾರೆ ಶ್ರೀರಾಜಶೇಖರ ಮಡಕಿಯವರು ತಾವು ಕಂಡಕನಸಿನ ವಿಷಯವನ್ನು ನನ್ನ ಮುಂದೆ ವಿವರಿಸಿ ಹೀಗೆ ಹೇಳಿದರು :

"ಪೂಜ್ಯಯೋಗಿರಾಜರು ಒಂದು ಹಣ್ಣಿನಗಂಟನ್ನು ತಲೆಯಮೇಲೆ ಮತ್ತೊಂದು ಹೆಗಲಮೇಲೆ ಹೊತ್ತುಕೊಂಡು ಹೊರಟಿದ್ದರು. ಅದನ್ನು ದಾರಿಯಲ್ಲಿ ಒಂದೊಂದಾಗಿ ಇಳಿಸಿದರು. ನಂತರ ದಣಿವಾಗಿ ಕೆಳಗೆ ಕೂತರು. ಹಿಂದೆ ನಾವು ಕೆಲ ಭಕ್ತರು ಹಿಂಬಾಲಿಸುತ್ತಿದ್ದೆವು. ಸ್ವಲ್ಪ ಹೊತ್ತಾದ ನಂತರ ಚೇತರಿಸಿಕೊಂಡು ಪುನಃ ಮುಂದೆ



ನಡೆಯಲಾರಂಭಿಸಿದರು. " ಇದರ ಅರ್ಥವನ್ನು ಮಡಕಿಯವರು ಶ್ರೀಗಳಿಗೆ ವಿಚಾರಿಸಲಾಗಿ ಅವರು "ಇದರಲ್ಲಿ ತಿಳಿಯದೆಇರುವಂತಹದು ಏನಿದೆ ? ಮುನ್ಸೂಚನೆ ನಿನಗೆ ಸರಳವಾಗಿ ಕಂಡಿದೆಯಲ್ಲಾ ? ಹಣ್ಣಿನ ಗಂಟು ಎಂದರೆ ನೀವು ನಿಮ್ಮೂರಲ್ಲಿ ಹೂಡಿದ ಸತ್ಕಾರ್ಯ. ಹೆಗಲಿನ ಮೇಲೆ ಮತ್ತು ತಲೆಯಮೇಲೆ ಗಂಟನ್ನು ಹೊತ್ತಿದ್ದನ್ನು ಕಂಡಿರುವಿ ಅಲ್ವೇನಪ್ಪಾ ! ನೋಡು ತಲೆಯಮೇಲಾದರೂ ಅಥವಾ ಹೆಗಲಮೇಲಾದರೂ ಹೊರಿಸಬೇಕಿತ್ತು. ಬೆಳಗ್ಗೆ ಪ್ರಾರ್ಥನಾಯೋಗ ಮತ್ತು ಸಾಯಂಕಾಲವ್ಯಾಖ್ಯಾನ ಈ ರೀತಿ ಪ್ರತಿನಿತ್ಯ ಕಾರ್ಯಕರ್ತರು ನನಗೆ ಇಮ್ಮಡಿಯಾಗಿ ಭಾರಹೇರುತ್ತಿದ್ದೀರಿ. ಗಂಟನ್ನು ಕೆಳಗೆ ಇಳಿಸಿ ಸ್ವಸ್ಥವಾಗಿ ಕುಳಿತ ದೃಶ್ಯವೆಂದರೆ ; ಬೇಗನೆ ನನ್ನ ಆರೋಗ್ಯಕ್ಕೆ ಸ್ವಲ್ಪ ಅಪಾಯವಾಗಬಹುದು. ಇಷ್ಟೇ ಇದರ ಅರ್ಥ " —ಎಂದು ವಿವರಿಸಿ ಹೇಳಿದರಂತೆ.

ಶ್ರೀರಾಜಶೇಖರ ಮಡಕಿಯವರು ಕನಸಿನ ಅರ್ಥ ಇನ್ನೂ ಒಂದು ಬಗೆಯಿಂದ ಪೂರ್ಣಗೊಳ್ಳುವಂತೆ ನನಗೆ ಅನಿಸಿಕೆ ಕಂಡು ಬಂದಿತು. ಶ್ರೀಗಳವರು ವಿವರಿಸಿದ ವಿವರಣೆ ನಾಣ್ಯದ ಒಂದು ಮುಖವಾದಂತೆ ಭಾಸವಾಯಿತು. ನಾಣ್ಯದ ಇನ್ನೊಂದು ಮುಖದ ವಿವರ ಈ ಕೆಳಗಿನಂತೆ ನನ್ನ ಅನುಭವಕ್ಕೆ ತೋರಿ ಬಂದಿತು.

ಇಲ್ಲಿ ಶ್ರೀಗಳೇ ಲಿಂಗವೃಕ್ಷ ತಲೆಯಮೇಲೆ ಮತ್ತು ಹೆಗಲ ಮೇಲೆ ಹೊತ್ತ ಗಂಟನೊಳಗಣ ಹಣ್ಣುಗಳೇ ಲಿಂಗದ ಕಾಯಿಗಳು. ಈ ಲಿಂಗದಕಾಯಿಗಳ ಗಂಟನ್ನು ಕೆಳಗಿಳಿಸಿ ಕುಳಿತು ದಣಿವಾರಿಸಿಕೊಳ್ಳುತ್ತಿರುವುದೆಂದರೆ:- ಶ್ರೀಗಳೆಂಬ ಮಹಾಲಿಂಗ ವೃಕ್ಷ ಫಲಭರಿತ ಲಿಂಗಪಣ್ಗಳಿಂದ ತುಂಬಿನಿಂತು ಭಾರವಾಗಿ ಅದು ತೊಟ್ಟು ಬಿಟ್ಟಿತೆಂದು ಅರ್ಥ-

ಬೇರುಸಹಿತವಾದ ಶ್ರೀಗಳೆಂಬ ಮಹಾಲಿಂಗವೃಕ್ಷ ಬೀಜೋತ್ಪತ್ತಿಗೆ ಕಾರಣವಾಗುವ ಹಣ್ಣುಗಳೆಂಬ ಇಷ್ಟಲಿಂಗಗಳನ್ನು ಪೋಪಪಾಲರೇ ಮೊದಲಾದ ಲೋಕದ ಮಹಾತ್ಮರಿಗೆ ನೀಡಿದುದೇ ಇದಕ್ಕೆ ಪ್ರಮಾಣ ! ಮರ್ತ್ಯದ ಕಾರ್ಯಪೂರ್ತಿಯ ಸಂಕೇತ ! ಅಂತೆಯೇ ಪರತತ್ತ್ವದ ಪ್ರತೀಕ—ಲಿಂಗಆಯತ !!.

---

ಟೀ:- 1. ಶ್ರೀಗಳವರು ಹದಗೊಂಡ ದೇಹವೆಂಬ ಭೂಮಿಯಲ್ಲಿ ಲಿಂಗಬೀಜವನ್ನು ಬಿತ್ತಿದಾಗ ಅವರು ತಾಕಿಕ ದೃಷ್ಟಿಯಲ್ಲಿ ಇಷ್ಟಲಿಂಗಧಾರಿಗಳಾಗಿದ್ದರು. ಅದೇ ಲಿಂಗಬೀಜ ಫಲಿಸಿ ಮಹಾಲಿಂಗವೃಕ್ಷವಾದಾಗ ಅವರು ಇಷ್ಟ ಲಿಂಗವನ್ನು ತ್ಯಜಿಸಿದರು, ಶ್ರೀಗಳೆಂಬ ಮಹಾಲಿಂಗವೃಕ್ಷಫಲಭರಿತವಾಗಿ ಅದು ತೊಟ್ಟು ಬಿಟ್ಟಾಗ, ಅವರು ಲೋಕದ ಮಹಾನುಭಾವಿಗಳಿಗೆ ಇಷ್ಟಲಿಂಗ ಕಾಯಿಗಳನ್ನು ನೀಡಿದರು. ಈ ರಹಸ್ಯಾತ್ಮಕವಾದ ಆಚರಣೆಯಲ್ಲಿ ತುರೀಯಾವಸ್ಥೆಯ ಆಚೆಗಿನ ಪರಮತತ್ತ್ವ ಪ್ರಕಟವಾಗಿದೆ.

2. ಕ್ರಿ. ಶ. 1922ರಲ್ಲಿ ಜೀವಸಮಾಧಿಸ್ಥರಾದ ಚೇಳ್ಳಗುರಿಕೆ ಶ್ರೀ ಎರ್ರಿತಾತನವರು ಆಗಾಗ ತಮ್ಮ ಮಠದಲ್ಲಿನ ಗಂಗಾಧರಪ್ಪನವರಿಗೆ " ಗಂಗಾಧರಪ್ಪಾ ನಾನು ಮಠದಯ್ಯನಯ್ಯಾ, ಯಾಕೋ ಏನೋ ಲಿಂಗವನ್ನು ಬಿಟ್ಟೆ " ಎಂದು ಹೇಳುತ್ತಿದ್ದರಂತೆ. ಅದುದ[illegible] ತ್ರಿಕಾಲಜ್ಞಾನಿಗಳಾದ ಮಹಾನುಭಾವಿಗಳ ನಡೆನುಡಿಗಳು ಲೋಕವಿಲಕ್ಷಣವಾಗಿರುವುದು ಸಹಜವಾಗಿದೆ.

3. " ಇಷ್ಟಲಿಂಗವೆಂಬ ಹಣ್ಣಿನೊಳಗಣಬೀಜ ವೊಳಕೆಯೊಡೆದು ಮಹಾಲಿಂಗವೃಕ್ಷವೇ ಆಗಿ ಕಂಗೊಳಿಸುವಲ್ಲಿ ಅದು ತನ್ನ ಪೂರ್ವದ ಹಣ್ಣಿನ ಸ್ವರೂಪವನ್ನು ಕೆಳೆದುಕೊಂಡಿತ್ತು ನೋಡಾ ! ಆ ಮಹಾಲಿಂಗವೃಕ್ಷ ಫಲಭರಿತವಾದಂತೆ ಮತ್ತೆ ಅದು ಪೂರ್ವಸ್ವರೂಪ ವಾಂಛ ಇಷ್ಟಲಿಂಗಕಾಯಿಗಳನ್ನು ಬೀಜವಾಗಿ ನೀಡಿತ್ತು ಕಾಣಾ–ಶ್ರೀಶೈಲಮಲ್ಲಿ ಕಾರ್ಜುನ." ಇಂತಹ ಲೋಕವಿಲಕ್ಷಣವಾದ ಅದ್ಭುತ ಪರಾತ್ಪರತತ್ತ್ವಪೂರಿತ ಸುಂದರ ಘಟನೆಯನ್ನು ನಾವು " ಬೀಜವೃಕ್ಷನ್ಯಾಯ "–(ಲೇ.) ವೆಂದು ನಿಸ್ಸಂದೇಹವಾಗಿ ಹೇಳಬಹುದು

ಟೀ: –4. ಸಮಗ್ರ ವೀರಶೈವ ಸಿದ್ಧಾಂತದ ಪ್ರತೀಕವಾದ " ಮಹಾಲಿಂಗವೃಕ್ಷ "ದ ಈ ವಿಚಾರವನ್ನು ನಾನು ಪೂಜ್ಯ ತಪಸ್ವಿಗಳವರಲ್ಲಿ ಅರಿಕೆಮಾಡಿಕೊಂಡಾಗ ಅವರು " ನೀವು ಬಹಳ ದೂರದವರೆಗೆ ವಿಚಾರಮಾಡಿದ್ದೀರಿ" ಎಂದರು. ದಿವ್ಯ " ಮಹಾ ಲಿಂಗವೃಕ್ಷ " ಸ್ವರೂಪರಾದ ಧಾರವಾಡ ನವಕಲ್ಯಾಣಮಠದ ತಪಸ್ವಿ ಶ್ರೀ ಕುಮಾರಸ್ವಾಮಿಗಳವರಲ್ಲಿ ನಮ್ಮ ಭಕ್ತಿಪೂರಿತ ಅನಂತ ಕೋಟಿ ಪ್ರಣಾಮಗಳು.

ಕಂದ ॥ ಲಿಂಗದ ವೃಕ್ಷಕೆ ಪಣ್ಗಳ್
ಲಿಂಗಮೆನೆ ಮಿಗೆ ಸೊಗಯಿಸಿ ವಿರಾಜಿಸುತಿರ್ಪ್ಪಂ
ಲಿಂಗದ ಬೀಜದೆ ವೃಕ್ಷಂ
ಹಿಂಗದೆ ತಾನಡಗೆ ಬೀಜವೃಕ್ಷನ್ಯಾಯಂ

—ಲಿಂಗವಿಲಾಸ (ಸತ್ಕಾವ್ಯಸೌರಭ)





# 'ಜ್ಞಾನಪೀಠ' ಪ್ರಶಸ್ತಿ ವಿಜೇತ ಮಾಸ್ತಿ ವೆಂಕಟೇಶ ಅಯ್ಯಂಗಾರ್

—ಹೆಚ್. ವಿ. ವೀರಭದ್ರಯ್ಯ



'ಶ್ರೀನಿವಾಸ'ರಿಂದಾಗಿ ಸಮಗ್ರ ಭಾರತದ ಸಾರಸ್ವತ ಲೋಕ ಕನ್ನಡದ ಕಡೆಗೆ ಕಣ್ಣು ಹಾಯಿಸುವಂತಾಗಿದೆ ಮತ್ತೊಮ್ಮೆ. ಕನ್ನಡಕ್ಕೆ ನಾಲ್ಕನೆಯ ಬಾರಿಗೆ ಜ್ಞಾನಪೀಠ ಪ್ರಶಸ್ತಿ. ಹಿಂದಿಯನ್ನು ಬಿಟ್ಟರೆ ಕನ್ನಡಕ್ಕೆ ಸಂದ ಹಿರಿಮೆ; ಅಗ್ಗಳಿಕೆ.

ಕುವೆಂಪು, ಬೇಂದ್ರೆ ಕಾರಂತರಿಗೆ ಈ ಮೊದಲ ಜ್ಞಾನಪೀಠ ಪ್ರಶಸ್ತಿ ಲಭ್ಯವಾಗಿತ್ತು. ಇದೀಗ ಮಾಸ್ತಿಯವರಿಗೆ ಆ ಗೌರವ.

ಮಾಸ್ತಿಯವರು ಸುಮಾರು ಎಪ್ಪತ್ನಾಲ್ಕು ವರ್ಷಗಳಷ್ಟು ಧೀರ್ಘಕಾಲ ಸಾಹಿತ್ಯಸೇವೆ ಮಾಡಿದ್ದಾರೆ. ಇಂಥವರು ವಿರಳ; ಅಪರೂಪ. ಸಾಹಿತ್ಯದಲ್ಲಿಯೂ ಹಿರಿಯರಾದ ಅವರ 'ಚಿಕವೀರ ರಾಜೇಂದ್ರ' ಕೃತಿಗೆ ಪ್ರಶಸ್ತಿ ಬಂದಿದೆ. ಒಂದೂವರೆ ಲಕ್ಷ ರೂಪಾಯಿಗಳಷ್ಟು ದೊಡ್ಡ ಮೊತ್ತ ತಂದಿದೆ. (ಬಂದ ಆ ನಿಧಿಯಲ್ಲಿ ಒಂದು ಲಕ್ಷ ರೂಗಳು ಬೇರೆ ಲೇಖಕರ ಕೃತಿ ಪ್ರಕಟಣೆಗೆ ಮೀಸಲಿಟ್ಟಿದ್ದಾರೆ: ಐವತ್ತು ಸಾವಿರ ರೂಗಳು ತಮ್ಮ ಸಾಹಿತ್ಯ ಕೃತಿಗಳ ಪ್ರಕಟಣೆಗೆ ಮೀಸಲು. ಮಾಸ್ತಿಯವರ ಔದಾರ್ಯ ದೊಡ್ಡದು. –ಪತ್ರಿಕೆಯಲ್ಲಿ ಬಂದ ಸುದ್ದಿ) ಮಾಸ್ತಿಯವರ ಬರವಣಿಗೆಯೂ ವೈವಿಧ್ಯಮಯ. ಕತೆ, ಕಾದಂಬರಿ, ಕವನ, ಕಥನ ಕವನ, ನಾಟಕ, ಜೀವನ ಚರಿತ್ರೆ, ಆತ್ಮಕಥೆ, ಅನುವಾದ –ಮುಂತಾಗಿ ಬಹುಮುಖವಾಗಿ ಕೃಷಿ ಮಾಡಿರುವ ಸಾಹಿತ್ಯ ಶ್ರೀಮಂತರಾದ ಮಾಸ್ತಿ ನಿಜಕ್ಕೂ ಕನ್ನಡದ ಆಸ್ತಿ. 'ಜೀವನ' ಅವರು ಬಹುಕಾಲ ನಡೆಸಿಕೊಂಡು ಬಂದ ಸದಭಿರುಚಿಯ ಶ್ರೇಷ್ಠ ಮಟ್ಟದ ಪತ್ರಿಕೆ. ಆ ಮೂಲಕ ಬಂದ ಸಂಪಾದಕೀಯಗಳಂತೂ, ಮೌಲಿಕ, ಪತ್ರಿಕೋದ್ಯಮದಲ್ಲಿ ನಿರತರಾದವರಿಗೆ ದಾರಿ ದೀಪಗಳು.

'ಚಿಕ್ಕವೀರ ರಾಜೇಂದ್ರ' ಕಾದಂಬರಿಯನ್ನು ಪ್ರಶಸ್ತಿಗೆ ಆಯ್ಕೆ ಮಾಡಿದ ಜ್ಞಾನ ಪೀಠ ಪ್ರಶಸ್ತಿ ಸಮಿತಿ, ಕೃತಿಯನ್ನು ನಿಮಿತ್ತ ಮಾಡಿಕೊಂಡು ಹಿರಿಯಣ್ಣ ಮಾಸ್ತಿಯವರನ್ನು ಗೌರವಿಸುವ ಮೂಲಕ ತನ್ನನ್ನು ತಾನೇ ಗೌರವಿಸಿಕೊಂಡಿದೆ. ಅಲ್ಲದೆ ಒಂದು ಉತ್ತಮ ಬದುಕನ್ನು. ಕನ್ನಡ ಸಂಸ್ಕೃತಿಯ ಸಾಕಾರ ಸೌಜನ್ಯಮೂರ್ತಿಯನ್ನು ಗೌರವಿಸಿದೆ. ಕನ್ನಡದ ಕೋಡಿಗೆ ಚಿನ್ನದ ಕಲಶ ತೊಡಿಸಿದೆ. ಮಾಸ್ತಿಯವರು ತುಂಬಾ ಸರಳ, ಪರಿಪಕ್ವ; ನಿರಂತರ ಎಚ್ಚರದ ಹಿರಿಯ ಜೀವ.

"ಮಹಾತ್ಮ ಗಾಂಧಿಯನ್ನು ಸೃಷ್ಟಿಸಿದ್ದು ಈ ನಾಡಿನ ಸಂಸ್ಕೃತಿ. ಅದನ್ನು ಹಾಗೆಯೇ ಕಾಪಾಡಿಕೊಂಡು ಬರಬೇಕಾದ ಹೊಣೆಗಾರಿಕೆ ನಮ್ಮೆಲ್ಲರ ಮೇಲಿದೆ" -ಎಂದಿದ್ದಾರೆ ಮಾಸ್ತಿಯವರು. (ಪ್ರಜಾವಾಣಿ : 8-7-84) ನಿಜ. ಅಂತೆಯೇ ಮಾಸ್ತಿಯವರಂಥ ಹಿರಿಯರನ್ನೂ ರೂಪಿಸಿದ್ದು- ಕನ್ನಡ ಸಂಸ್ಕೃತಿ, ಭಾರತೀಯ ಪರಂಪರೆ. ಅದನ್ನು ಕಾಪಾಡಿಕೊಂಡು ಬರುವ ಜವಾಬ್ದಾರಿ ಕನ್ನಡಿಗರ ಮೇಲಿದೆ ಎಂಬುದನ್ನು ಮರೆಯಬಾರದು.

'ಚಿಕವೀರ ರಾಜೇಂದ್ರ' ಕೊಡಗಿನ ಇತಿಹಾಸಕ್ಕೆ ಸಂಬಂಧಿಸಿದ ಕೃತಿ; ಕಾದಂಬರಿ. ಇಲ್ಲಿ ಬರುವ "ಚಿಕವೀರ ರಾಜನ ಕಥೆ ನಮ್ಮ ಜನರ ಕರುಳನ್ನು ಶೋಧಿಸುವ ಕಥೆ" -ಎಂಬ ಮಾತಿದೆ ಕೃತಿಯಲ್ಲಿ. ಕಾದಂಬರಿಯನ್ನು ಕೊನೆಯವರೆಗೆ ಓದಿದಾಗ ಲೇಖಕರ ಮಾತಿನ ಅಂತರಂಗದ ಅರಿವಾಗುತ್ತದೆ. "ಮನುಷ್ಯ ಕಥೆಯನ್ನು ರಚಿಸುವಂತೆ ಜೀವನ ಕಥೆಯನ್ನು ರಚಿಸುತ್ತದೆ" -ಎಂದಿದ್ದಾರೆ ಮತ್ತೆ ಅಲ್ಲಿಯೇ. ಇದು ಮಾಸ್ತಿಯವರ ಪರಿಪೂರ್ಣದೃಷ್ಟಿ. "ಚೆನ್ನಾದ ನಂಬಿಕೆಯಿಂದ ಬಾಳು ಚೆನ್ನಾಗುವುದು" (ನಾವು ಮಹಿಮೆ - ನವರಾತ್ರಿ ಪುಟ 77) ಎನ್ನುವ ಮಾಸ್ತಿಯವರ ಜೀವನದ ಮೂಲಧಾತು ದೈವದ ಮೇಲೆ ಅವರಿಟ್ಟಿರುವ ಅನನ್ಯ ನಂಬಿಕೆ. "ದೈವ ಕೈ ಬಿಟ್ಟ ವಸ್ತುವನ್ನು ಜಲ, ನೆಲ, ಬಾನು ಎಲ್ಲವೂ ನುಂಗುವುದು; ದೈವ ಕೈ ಹಿಡಿದುದನು ಎಲ್ಲವೂ ಸಲಹುವುದು"—(ನಾವು ಮಹಿಮೆ-ನವರಾತ್ರಿ-ಪುಟ 76)

ಮಾಸ್ತಿಯವರ ಈ ನಂಬಿಕೆ ನಮಗೆ ದಾರಿದೀಪ. ಚಿಕವೀರರಾಜೇಂದ್ರ ಕೃತಿಯನ್ನು ರಚಿಸಿ ಕನ್ನಡಕ್ಕೆ ಕೀರ್ತಿ, ಪ್ರತಿಷ್ಠೆಗಳನ್ನು ತಂದು ಕೊಟ್ಟ ಅಣ್ಣ ಮಾಸ್ತಿಯವರ ವಿನಯ ಜ್ಞಾನಪೀಠ ಪ್ರಶಸ್ತಿಯಷ್ಟೆ ದೊಡ್ಡದು; ಅಲ್ಲ; ಅದಕ್ಕಿಂತಲೂ ಮಿಗಿಲು ಕಾದಂಬರಿಯ ಕೊನೆಯಲ್ಲಿ ಹೀಗೆ ಬರೆಯುತ್ತಾರೆ "ಆದ್ಯರವಚನಪುರುಷ ಎಂದರು, ಅಣ್ಣ; ರಾಯರಪತ್ರಕಥೆಗೆ ಭರತವಾಕ್ಯ"-ಎಂದು. ತಮಗೆ ಕೃತಿರಚಿಸಲು ನೆರವಾದ ಗೆಳೆಯರ ಬಗ್ಗೆ ಅಷ್ಟು ಕೃತಜ್ಞರು. ಸಾಹಿತ್ಯಬ್ರಹ್ಮರಾದ ಮಾಸ್ತಿಯವರ ಈ ವಿನಯ, ಸೌಜನ್ಯಗಳು ನಮಗಾಗಬೇಕು ಮಾರ್ಗ ದರ್ಶಕಗಳು.

ನೂರು ಸಂವತ್ಸರಗಳಲ್ಲಿ ದೊಡ್ಡ ಬದುಕು ಅಣ್ಣ ಮಾಸ್ತಿಯವರದಾಗುವಂತೆ "ಆದ್ಯರು" ಹರಸಲಿ ಎಂಬ ಪ್ರಾರ್ಥನೆ ನಮ್ಮದಾಗಲಿ.



# ವಿವಿಧ ಸಮಾರಂಭಗಳಲ್ಲಿ—ಶ್ರೀ ಶ್ರೀಗಳವರು

—ಪಿ. ಎನ್. ಚಂದ್ರಶೇಖರಯ್ಯ

ದಿನಾಂಕ 1-7-84 ರ ಭಾನುವಾರ ಸಂಜೆ ತುಮಕೂರಿನ ಮಹಾತ್ಮ ಗಾಂಧಿ ಕ್ರೀಡಾಂಗಣದಲ್ಲಿ ಭಾರತ ಸರ್ಕಾರದ ಸಂಗೀತ ಮತ್ತು ನಾಟಕ ವಿಭಾಗದವರು ರಾಜ್ಯ ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ವಾರ್ತಾ ಇಲಾಖೆ ನೆರವಿನೊಂದಿಗೆ ಏರ್ಪಡಿಸಿದ್ದ ನವ್ಯವಾದ ಧ್ವನಿ ಮತ್ತು ಬೆಳಕಿನ ಶ್ರೀ ಕೃಷ್ಣದೇವರಾಯ ನಾಟಕ ಕಾರ್ಯಕ್ರಮ ಸಮಾರಂಭವನ್ನು ಉದ್ಘಾಟಿಸುತ್ತಾ ಶ್ರೀ ಶ್ರೀಗಳವರು ಕೇಂದ್ರ ಮತ್ತು ರಾಜ್ಯ ಸರ್ಕಾರಗಳ ಜಂಟೀ ಕಾರ್ಯಕ್ರಮವಾಗಿ ಒಂದು ತಿಂಗಳ ಕಾಲ ನಡೆಯುವ ಈ ನಾಟಕ ಪ್ರದರ್ಶನವು ಕಲೆಗಾರರಿಗೆ ಸ್ಫೂರ್ತಿಯ ಚಿಲುಮೆಯಾಗಿ, ರಸಿಕರಿಗೆ ರಸ ದೌತಣವಾಗಿ ಸಭ್ಯ ಪ್ರೇಕ್ಷಕರಿಗೆ ಹೃದಯಾನಂದಕರವಾಗಿ, ನಾಗರಿಕರಿಗೆ ಮನೋ ರಂಜನೆಯಾಗಿ ಮೂಡಿಬರಲಿ"

ನಮ್ಮ ಪ್ರಾಚೀನ ಸಂಸ್ಕೃತಿ ನಾಗರೀಕತೆಗಳ ಪರಂಪರೆ ಪರಿಚಯವನ್ನು ಜನತೆಗೆ ಮೂಡಿಸುವ ದಿಸೆಯಲ್ಲಿ ಕೈಗೊಂಡಿರುವ ಘನ ಸರಕಾರದ ಉದ್ದೇಶ ಫಲಕಾರಿಯಾಗಲೆಂದು ಆಶಿಸಿದರು.

* * *

ದಿನಾಂಕ 3-7-84 ರ ಮಂಗಳವಾರ ತುಮಕೂರಿನ ಸಮೀಪದ ಒಟವಾಡೆ ಗ್ರಾಮದಲ್ಲಿ ಭಾರತೀಯ ಸ್ಟೇಟ್ ಬ್ಯಾಂಕಿನ ಬೆಂಗಳೂರು ವೃತ್ತದ ೩೦೦ನೇ ಶಾಖೆಯ ಉದ್ಘಾಟನೆಯನ್ನು ಮಾಡುತ್ತ ಶ್ರೀ ಶ್ರೀಗಳವರು ಅಪ್ಪಣೆ ಕೊಡಿಸಿದ ಅಂಶಗಳು— ಭಾರತ ಖಂಡದ ಭೀಕರ ದಾರಿದ್ರ್ಯ ಒಂದು ದೊಡ್ಡ ಪಿಡುಗಾಗಿ ಗ್ರಾಮೀಣ ಪ್ರದೇಶವನ್ನು ಕಾಡುತ್ತಿದೆ ಹಳ್ಳಿಗಾಡಿನ ಅಭಿವೃದ್ಧಿಯಲ್ಲಿ ಬ್ಯಾಂಕಿಂಗ್ ಸಂಸ್ಥೆಗಳು ಚಿಂತಿಸುತ್ತಿರುವುದು ಶುಭಸೂಚಕ. ಮತ್ತು ಕೈಗಾರಿಕಾ ಮತ್ತು ವ್ಯಾಪಾರೀ ಸಂಸ್ಥೆಗಳಿಗೆ ಬ್ಯಾಂಕಿಂಗ್ ಸೌಲಭ್ಯ ಅತ್ಯಂತ ಮುಖ್ಯವಾದದ್ದು. ಈ ದಿಸೆಯಲ್ಲಿ ಹೊಸ ಶಾಖೆ ಸೇವೆ ಸಲ್ಲಿಸಲಿ ಎಂದು ಹಾರೈಸಿದರು.

* * *

ದಿನಾಂಕ 8-7-84 ರಂದು ತುಮಕೂರಿನಲ್ಲಿ ಶ್ರೀ ಸಿದ್ಧಗಂಗಾ ತಾಂತ್ರಿಕ ಕಾಲೇಜಿನ ಆಡಿಟೋರಿಯಂನಲ್ಲಿ ನಡೆದ ದ್ವಿತೀಯ ಜೇಸಿರೇಟ್ಸ್ ಸಮ್ಮೇಳನದ

ಅಧ್ಯಕ್ಷತೆ ವಹಿಸಿ ಮಾತನಾಡುತ್ತಾ, ಈ ಜೇಸೀ ಸಂಸ್ಥೆಯು ವಿದೇಶಿಯರ ಕೊಡುಗೆಯಾದರೂ ಅದರ ಸಂಸ್ಕೃತಿ ಮತ್ತು ಧ್ಯೇಯ ಧೋರಣೆಗಳು ಮಾನವ ಕುಲ ಉದ್ಧಾರಕ್ಕಾಗಿ ಎಂದಾಗ ಮೆಚ್ಚತಕ್ಕದ್ದಾಗಿದೆ. "ಜಗತ್ತಿನ ಶ್ರೇಷ್ಠ ಸಂಪತ್ತು ಮಾನವನ ವ್ಯಕ್ತಿತ್ವದಲ್ಲಿ ಅಡಗಿದೆ. ಮಾನವ ಕುಲದ ಸೇವೆಯೇ ಜೀವನದ ಅತ್ಯುತ್ತಮ ಕಾರ್ಯ" ಎಂಬ ಆದರ್ಶವನ್ನು ಮುಂದಿಟ್ಟುಕೊಂಡು ಈ ಸಂಸ್ಥೆಯು ಮುನ್ನಡೆಯುತ್ತಿರುವುದು ಜಗತ್ತಿನ ಶಾಂತಿಗೆ ಸಾಧಕವಾಗಲಿ ಎಂದು ನಾವು ಹಾರೈಸುತ್ತೇವೆ. ಜಗತ್ತಿನ ಅನಿಷ್ಟ ವಾತಾವರಣ ನಿವಾರಣೆಯಾಗಿ ಮಂಗಳಕರ ವಾತಾವರಣ ನಿರ್ಮಾಣ ಮಾಡುವವರು ಯಾರು ? ಎಂದು ಜಗತ್ತಿನ ಶಾಂತಿ ಸಂದೇಶಕರ ಪ್ರಶ್ನೆಯಾಗಿದೆ. ಇದಕ್ಕೆ ಉತ್ತರ ಕೊಡುವವರು ಯಾರು ? ಭರತ ಖಂಡದ ಕಡೆ ಉತ್ತರಕ್ಕಾಗಿ ಜಗತ್ತು ನೋಡುತ್ತಿದೆ. ಜಗತ್ತಿನ ಭವಿಷ್ಯ ಹಸನಾಗಬೇಕು. ಭಾರತೀಯ ಸನಾತನ ಧರ್ಮ ಜಗತ್ತಿಗೇ ಅಭಯ ನೀಡುತ್ತಿದೆ. "ಸರ್ವೇ ಜನಾಃ ಸುಖಿನೋ ಭವಂತು" ಎಂದು. ಆದ್ದರಿಂದ ನಮ್ಮ ಭಾರತೀಯ ಧರ್ಮ ಮತ್ತು ಸಂಸ್ಕೃತಿಯ ಸಾಕಾರ ಮೂರ್ತಿಗಳಾದ ನಮ್ಮ ಹೆಣ್ಣುಮಕ್ಕಳು ನಮ್ಮ ಸನಾತನ ಸಂಸ್ಕೃತಿಯನ್ನು ಉಳಿಸಿ ಬೆಳೆಸಬೇಕು. ವಿದೇಶಿ ಹೆಣ್ಣುಮಕ್ಕಳಿಗೆ ಆದರ್ಶರಾಗಬೇಕು. ಭಾರತೀಯ ಹೆಣ್ಣುಮಕ್ಕಳ ಜವಾಬ್ದಾರಿ ಇಲ್ಲಿ ಗುರುತರವಾಗಬೇಕು. ಪ್ರಪಂಚದ ಸ್ತ್ರೀ ಸಮುದಾಯಕ್ಕೆ ಗುರುತರವಾಗಬೇಕು. ಶ್ರೀರಾಮನಂತಹ ಆದರ್ಶ ಪುರುಷರು ಬಹಳ ಮಂದಿ ಇರಬಹುದು. ಸೀತಾದೇವಿಯರಂತಹ ಆದರ್ಶ ಹೆಣ್ಣುಮಕ್ಕಳ ಸಂಖ್ಯೆ ಇಂದು ಅಧಿಕವಾಗಬೇಕಾಗುತ್ತದೆ.

ಅಮೇರಿಕಾದಲ್ಲಿ ಮಹಿಳೆಯೊಬ್ಬಳು ತಾನು ನೋಡುತ್ತಿದ್ದ ಟಿ.ವಿ. ಯನ್ನು ಒಳಗೆ ಹೋಗಿ ಬರುವಷ್ಟರಲ್ಲಿ ತನ್ನ ಪತಿ ಬೇರೆ ದೃಶ್ಯವನ್ನು ನೋಡುತ್ತಿದ್ದ ಸಣ್ಣ ಕಾರಣಕ್ಕಾಗಿ ನ್ಯಾಯಾಲಯಕ್ಕೆ ಹೋಗಿ ಅರ್ಜಿ ಸಲ್ಲಿಸಿದಳಂತೆ ವಿವಾಹ ವಿಚ್ಛೇದನಕ್ಕೆ –ಇದು ಎಂತಹ ಸಂಸ್ಕೃತಿ ? ಎಂತಹ ದಾಂಪತ್ಯ ? ನಮ್ಮ ತಾಯಂದಿರು ನಮ್ಮ ಸಂಸ್ಕೃತಿ ರಕ್ಷಕರು ಅಷ್ಟೇ ಸಂಸ್ಕೃತಿಯ ಸಾಕಾರ ಮೂರ್ತಿಗಳು ಎಂಬುದನ್ನು ಜಗತ್ತಿಗೆ ತೋರಿಸಿಕೊಡಬೇಕು. ನಮ್ಮ ಧೈರ್ಯ ಸ್ಥೈರ್ಯ ಅಭಿಮಾನ ಸಚ್ಚಾರಿತ್ರ್ಯಗಳಲ್ಲಿ ನಮ್ಮ ತಾಯಂದಿರು ಪ್ರಪಂಚದ ರಾಷ್ಟ್ರಗಳಿಗೆ ಆದರ್ಶವಾಗಬೇಕು. "ಗೃಹಿಣೀ ಗೃಹ ಮುಚ್ಯತೇ" ಎಂಬ ಆರ್ಯೋಕ್ತಿಯನ್ನು ಸತ್ಯ ಮಾಡಿ ಜಗತ್ತಿಗೆ ತೋರಿಸಿಕೊಡಬೇಕು. ಆದರ್ಶ ಗೃಹಿಣಿಯಿಂದ ಎಲ್ಲ ಸಮಸ್ಯೆಗಳೂ ನಿವಾರಣೆಯಾಗುತ್ತವೆ.

*   *   *

8–7–84 ರಂದು ಕಡಬ ಗ್ರಾಮದಲ್ಲಿ ಶ್ರೀ ರಾಮಲಕ್ಷ್ಮೀಜನಾರ್ಧನಸ್ವಾಮಿ ದೇವಸ್ಥಾನದ ಜೀರ್ಣೋದ್ಧಾರ ಪ್ರತಿಷ್ಠಾಪನಾ ಸಮಾರಂಭದಲ್ಲಿ ಆಶೀರ್ವಚನ ಮಾಡುತ್ತಾ. ಜಗತ್ತು ಇಂದು ಅಶಾಂತಿಯಿಂದ ಅಸ್ತವ್ಯಸ್ತವಾಗಿದೆ. ಸುತ್ತಲೂ ಭಯಾನಕ ವಾತಾವರಣ ಕವಿದಿದೆ. ಮೂರನೆಯ ಮಹಾಯುದ್ಧ ವಾಗಬಹುದೆಂದು ಶಂಕೆ ಎಲ್ಲ ಮಾನವ ಪ್ರೇಮಿಗಳು ಮನವನ್ನು ಕದಡಿದೆ. ಮತ್ತೊಮ್ಮೆ ಜಗತ್ತಿನಲ್ಲಿ ಶಾಂತಿ ಸ್ಥಾಪನೆ ಮಾಡುವ ಹೊಣೆಯನ್ನು ಭರತಖಂಡದ್ದೆಂದು ಕೈ ಮಾಡಿತೋರಿಸಲಾಗುತ್ತದೆ." ಸು. 15 ವರ್ಷಗಳ ಹಿಂದೆ ನಮ್ಮ ಯುವಕನೊಬ್ಬ ಅಮೇರಿಕಾ ದೇಶಕ್ಕೆ ಹೋಗಿದ್ದಾಗ ಒಬ್ಬ ಪ್ರಸಿದ್ಧ ವಿಜ್ಞಾನಿಯನ್ನು ಸಂದರ್ಶಿಸಿದ. ಆ ವಿಜ್ಞಾನಿಯು ಪರಮಹಂಸರ ಭಾವಚಿತ್ರವನ್ನು ತೋರಿಸುತ್ತಾ ಇವರ ಬಗ್ಗೆ ನಿಮಗೆ ಪರಿಚಯ ವಿದಿಯೇ ಎಂದು ವಿಚಾರಿಸಿದರು. ಯುವಕನು ಸಾಧಾರಣ ಪರಿಚಯವಷ್ಟೇ ಎಂದಾಗ ಅಮೇರಿಕಾದ ವಿಜ್ಞಾನಿಯು ಭಾವಾವೇಶದಿಂದ ಮಾತನಾಡಿದರಂತೆ. "ಬಹಳ ಮಂದಿ ಭಾರತೀಯ ಯುವಕರು ನಮ್ಮ ದೇಶಕ್ಕೆ ಬರುತ್ತೀರಿ ನಿಮಗೆ ಹಾರ್ದಿಕಸ್ವಾಗತ: ಅಧ್ಯಯನಮಾಡಿ ನಿಮ್ಮ ದೇಶಕ್ಕೆ ಮರಳಿದಾಗ ನಿಮ್ಮ ಹಿಂದೂ ಧರ್ಮದ ಸಂದೇಶ ಮಂತ್ರವನ್ನು ಉದಾಸೀನ ಮಾಡಬೇಡಿ. ಈ ಉದಾಸೀನದಿಂದ ಉಂಟಾಗುವ ಹಾನಿ ಕೇವಲ ಭಾರತ ದೇಶಕ್ಕಲ್ಲ. ಅದು ವಿಶ್ವಕ್ಕೆ ಹಾನಿಯನ್ನುಂಟುಮಾಡುತ್ತದೆ. ಹಿಂದೂಧರ್ಮದ ಉದ್ಧಾರ ಜಗತ್ತಿನ ಉದ್ಧಾರ ಹಿಂದೂಧರ್ಮದ ನಾಶ ಜಗತ್ತಿನ ನಾಶ ಎಂದು" ತಿಳಿಸಿದರಂತೆ, ಆದ್ದರಿಂದ ನಮ್ಮ ಪೂರ್ವಿಕರು ಎಂದೆಂದೂ ನಂದಿಹೋಗದ ಧರ್ಮಜ್ಯೋತಿಯನ್ನು ನಮಗೆ ಕೊಟ್ಟು ಹೋಗಿದ್ದಾರೆ. ಅದನ್ನು ಕಾಪಾಡಿಕೊಂಡು ಬರುವುದು ಕರ್ತವ್ಯವಾಗಿದೆ. ಧರ್ಮವೆನ್ನುವುದು ನಮ್ಮ ರಾಷ್ಟ್ರದ ಜೀವನಾಡಿ ದೇವಾಲಯಗಳು ಧರ್ಮಸಂಸ್ಥಾಪನೆಯ ಕೇಂದ್ರಗಳಾಗಬೇಕು. ನಮ್ಮ ಜೀವನವನ್ನು ಸರ್ವಾಂಗ ಸುಂದರವನ್ನಾಗಿ ಮಾಡುವ ಕೇಂದ್ರಗಳಾಗಬೇಕು. ಆಧ್ಯಾತ್ಮಿಕ ಮಾರ್ಗ ಜೀವನ ಪರಿಪೂರ್ಣತೆಯ ಗುರಿಯನ್ನು ತೋರುವ ದಿವ್ಯದರ್ಶನ. ನಮ್ಮ ಪ್ರತಿಯೊಂದು ಕರ್ಮವು ಪರಿಪೂರ್ಣತೆಯ ಕಡೆ ನಮ್ಮನ್ನು ಒಯ್ಯುವಂತಹ ಸತ್ಕಾರ್ಯವಾಗ ಬೇಕು.

# ಗ್ರಾಮಾಂತರ ಬಸವ ಜಯಂತಿ–೩

—ಹೆಚ್. ವಿ. ವೀರಭದ್ರಯ್ಯ

ದಿನಾಂಕ 13-4-84 ಒಂದು ಸುಂದರ ಸಾರ್ಥಕ ಬೆಳಗು. ಬೆಂಗಳೂರಿನ ಒಂದು ತುದಿಯ ತನೆ ರಘುವನಹಳ್ಳಿ. ಕನಕಪುರದ ರಸ್ತೆ ಬದಿಗೆ ಆ ಪುಣ್ಯ ಪುಟ್ಟ ಗ್ರಾಮ. ಅಲ್ಲೊಂದು ಸಮಾರಂಭ; ಸುವ್ಯವಸ್ಥಿತ ವೇದಿಕೆ, ಭವ್ಯವಾದ ಸಭಾಮಂಟಪ, ತಳಿರುತೋರಣಗಳ ನಿಷ್ಕಲ್ಮಶ ನಗು, ಪ್ರಶಾಂತ ವಾತಾವರಣ, ಬಸವತತ್ವಪ್ರೇಮಿಗಳಿಂದ ಭಕ್ತಿಪೂರ್ವಕ ಸ್ವಾಗತ ಪರಮಪೂಜ್ಯ ಸಿದ್ಧಗಂಗಾ ಶ್ರೀ ಶ್ರೀಗಳವರಿಗೆ, ಹರಗುರು ಚರಮೂರ್ತಿಗಳ ಸಮ್ಮಿಳನ, ಆದರಿಂದ ಸಭೆಗೆ ಇನ್ನಷ್ಟು ಶೋಭೆ.

ಗಡಿಯಾರ ನಾಚಿತ್ತು, ಶ್ರೀ ಶ್ರೀಗಳವರ ಕಾಲ ಪ್ರಜ್ಞೆಯನ್ನು ಕುರಿತು. ಬೆಳಗಿನ ಹತ್ತು ಗಂಟೆಗೆ ಸರಿಯಾಗಿ ಕಾರ್ಯಕ್ರಮ ಪ್ರಾರಂಭ. ವೇದಿಕೆಯ ಮೇಲೆ ಕರ್ನಾಟಕದ ಸಾರಿಗೆ ಸಚಿವರಾದ ಶ್ರೀ ಎಂ.ಪಿ. ಪ್ರಕಾಶ್, ಸುಪ್ರಸಿದ್ಧ ಸಾಹಿತಿಗಳಾದ ಡಾ|| ಸಿದ್ಧಯ್ಯ ಪುರಾಣಿಕ್, ಉದ್ದಾಮ ವಿದ್ವಾಂಸರಾದ ಚೆನ್ನಪ್ಪ ಎರೇಸೀಮೆ, ಬಂಡೇಮಠದ, ನೆಲಮಂಗಲ ಮಠದ ಶ್ರೀ ಶ್ರೀಗಳವರು. ಅಧ್ಯಕ್ಷ ಪೀಠದಲ್ಲಿ ಸಿದ್ಧಗಂಗಾ ಪೂಜ್ಯ ಶ್ರೀ ಶ್ರೀಗಳವರು. ವಚನ ಗಾಯನದೊಂದಿಗೆ ಪ್ರಾರ್ಥನೆ. ಶ್ರೀ ಶಿವಸ್ವಾಮಿಯವರಿಂದ ಸ್ವಾಗತ. ಬಸವ ಭಕ್ತಿಯ ಮಹಾದೃಶ್ಯ.

ಆತ್ಮಗೌರವದ, ಸ್ವಾಭಿಮಾನದ ಚಳುವಳಿ ಬಸವ ಜಯಂತಿ:– ಬಸವಣ್ಣನ ಕ್ರಾಂತಿ ಮನುಕುಲದ ವೈಚಾರಿಕ ಕ್ರಾಂತಿ. ಅವನೊಬ್ಬ ದೊಡ್ಡ ಹೋರಾಟಗಾರ. ಮಾನವ ಪ್ರೇಮವನ್ನು ಬಿತ್ತಿ ಬೆಳೆದ. ಬದುಕನ್ನು ತೀವ್ರವಾಗಿ ಪ್ರೀತಿಸಿದ. ಮೂಢನಂಬಿಕೆಗಳನ್ನು ಖಂಡತುಂಡವಾಗಿ ವಿರೋಧಿಸಿದ. ಇಂದು ನಾವು ವೈಯಕ್ತಿಕವಾಗಿ ಶುಚಿಯಾಗಿದ್ದರೂ, ಸಾಮೂಹಿಕವಾಗಿ ಕೊಳಕಾಗಿದ್ದೇವೆ. ಆಧುನಿಕವಾಗಿ ರಾಷ್ಟ್ರವನ್ನಾಳುತ್ತಿರುವ ಮೂರು ಮೂಲಭೂತ ಸಾಧನಗಳಿವೆ. ಅವು ಮೇಲ್ಜಾತಿ, ಹಣ ಮತ್ತು ಇಂಗ್ಲಿಷ್. ಇಂಥವುಗಳ ಮಧ್ಯೆ ಬಸವಣ್ಣನವರ ತತ್ವಗಳಿಂದು ಹೊಸ ದಿಗಂತವನ್ನು ತೋರಬೇಕಾಗಿದೆ –ಎಂದರು ಸಾರಿಗೆ ಸಚಿವರಾದ ಶ್ರೀ ಪ್ರಕಾಶ್‌ರವರು.

ಶೂದ್ರನಿಗೆ ಬ್ರಹ್ಮವಿದ್ಯೆಯ ಅಧಿಕಾರವಿಲ್ಲ. ಶೂದ್ರರಿಗೆ ಜ್ಞಾನವನ್ನು ಕೊಡಬಾರದು ಎಂಬುದರ ವಿರುದ್ಧ ದಿಟ್ಟ ಹೋರಾಟ ನಡೆಸಿದ ಯುಗಪುರುಷ ಬಸವಣ್ಣ; ಯುಗ ಪ್ರವರ್ತಕನೂ ಹೌದು. ಬಸವಣ್ಣನಿಗೆ ಇನ್ನೂ ಸಾರ್ವತ್ರಿಕ ಗೌರವ ದೊರೆತಿಲ್ಲ, ಅದು ನಮ್ಮ ದೌರ್ಭಾಗ್ಯ. ಅಕ್ಷರ ಕ್ರಾಂತಿ, ಕಾಯಕ ಕ್ರಾಂತಿ, ಮಹಿಳಾ ಕ್ರಾಂತಿಗಳ ಮಂಗಳ ದೀಪವಾದಾತ. ಮಾತೃಭಾಷೆ ಪ್ರಧಾನ, ಇನ್ನುಳಿದುವೆಲ್ಲ ಅದಕ್ಕೆ ಅಧೀನ. ವಿದ್ಯೆ ಸಾರ್ವತ್ರಿಕ. ಪ್ರತಿಯೊಬ್ಬನಿಗೂ ಅದರ ಹಕ್ಕಿದೆ. ಅದನ್ನು ಪಡೆಯಲು ಲಿಂಗಭೇದ ಸಲ್ಲ. ವಿದ್ಯೆ ಸಮಾಜಕ್ಕೆ ಘಾತುಕವಾಗಬಾರದು. ವ್ಯಕ್ತಿಯ ವಿಕಾಸಕ್ಕೆ ಕಾರಣವಾಗಬೇಕು. ಹೆಣ್ಣು ಅನೇಕ ಶತಮಾನಗಳಿಂದ ಜೀವಚ್ಛವಾಗಿ ಬಾಳಿದ್ದಾಳೆ; ಬಾಳುತ್ತಿದ್ದಾಳೆ. ಅವಳ ದಾಸ್ಯ ವಿಮೋಚನೆ ಮಾಡಿದ ಪುಣ್ಯ ಅಣ್ಣನದು ಎಂಬುದಾಗಿ ವಿಚಾರಪೂರ್ಣ ಮಾತುಗಳನ್ನಾಡಿದವರು ಶ್ರೀ ಸಿದ್ಧಯ್ಯ ಪುರಾಣಿಕರು.

ಶಾಸಕ ಹೆಚ್. ಗಂಗಾಧರನ್‌ರವರು ಮಾತನಾಡುತ್ತ ವೀರಶೈವ ಸಂಸ್ಕೃತಿ ಮಾನವೀಯತೆಯ ಗಂಧಪರಿಮಳದಿಂದ ತುಂಬಿ ಘಮಘಮಿಸುವಂತಹುದು. ಅದರ ಆಚರಣೆಯಲ್ಲಿ ನಾವಿಂದು ಜಡವಾಗಿದ್ದೇವೆ. ಆ ಸಂಸ್ಕೃತಿಯನ್ನು ಉದಾತ್ತಗೊಳಿಸಿದ, ಕೀರ್ತಿ ಬಸವಣ್ಣನವರದು. ಅದನ್ನಿಂದು ಅನುಸರಿಸಬೇಕಾಗಿದೆ –ಎಂದರು.

ಮಹಾತ್ಮರ ದರ್ಶನದಿಂದ, ಸ್ಮರಣೆಯಿಂದ ಮಾನಸಿಕ ಸ್ವಚ್ಛತೆಯುಂಟಾಗುತ್ತದೆ. ಮಹಾತ್ಮರ ಸಾಲಿನಲ್ಲಿ ಕಂಗೊಳಿಸುತ್ತಿರುವ ಮಹಾವ್ಯಕ್ತಿ ಬಸವಣ್ಣ. ಸಮಸ್ತ ಮಾನವ ಕುಲದ ಪ್ರತಿನಿಧಿ. ಧಾರ್ಮಿಕ ರಾಜ್ಯಾಂಗವನ್ನು ರೂಪಿಸಿದಾತ. ಬಸವ ಜಯಂತಿಯ ಉದ್ದೇಶ ಬಸವಣ್ಣನವರನ್ನು ಅರ್ಥ ಮಾಡಿಕೊಂಡು ಜಾಗೃತರಾಗಿ ಬಾಳುವುದಕ್ಕಾಗಿ. ಅದನ್ನೊಂದು 'ಶಿವಪೂಜೆ' ಎಂದು ಭಾವಿಸಿ ಆಚರಿಸುತ್ತಿದ್ದಾರೆ ಇಂದು ಶ್ರೀ ಶ್ರೀಗಳವರು. ಸಮಾಜದ ಭಾಗ್ಯ, ನಾಡಿನ ಪುಣ್ಯ ಇದು. ಸತ್ಯಶುದ್ಧ ಕಾಯಕಕ್ಕೆ ನೀಡುತ್ತಿರುವ ಆಹ್ವಾನ ಎಂದು ವಿಶ್ಲೇಷಿಸುತ್ತ ಮೆಚ್ಚಿ ನುಡಿದರು ಪಂಡಿತ ಚನ್ನಪ್ಪ ಎರೇಸೀಮೆಯವರು.

ದ್ವಿತೀಯ ಅಧಿವೇಶನದಲ್ಲಿ ಮಾತನಾಡಿದ ಪಂಡಿತ ಶ್ರೀ ಕೆ. ಪಿ. ಶಿವಲಿಂಗಯ್ಯನವರು –ದೇಹವನ್ನು ದೇವಾಲಯವೆಂದು ಭಾವಿಸಿ ಗೌರವಿಸಿದ ಬಸವಣ್ಣ ಅದನ್ನು ಪ್ರಸಾದ ಕಾಯವನ್ನಾಗಿ ಮಾಡುವ ಕಲೆಯನ್ನ ಕಲಿಸಿದ. ಅಲ್ಲದೆ 'ಸತಿಯನ್ನು ಕಂಡು ವ್ರತಿಯಾದ ಬಸವಣ್ಣ' –ಎಂಬುದಾಗಿ ಉಪನ್ಯಾಸ ಮಾಡಿದರು.

ಸಾತ್ವಿಕವಾಗಿ ಜೀವಿಸುವುದನ್ನು ಬಸವಣ್ಣ ಕಲಿಸಿದರು ಎಂಬ ಮಾತನ್ನಾಡಿದವರು ಶ್ರೀ ಯಾದಾಳಂ ಗೋಪಾಲಕೃಷ್ಣಶೆಟ್ಟಿಯವರು.

ಬಂಡೇಮಠದ ಪೂಜ್ಯ ಶ್ರೀ ಶ್ರೀ ಶಿವರುದ್ರಸ್ವಾಮಿಗಳವರು ಮಾತನಾಡುತ್ತ ಬಸವಣ್ಣ ಒಂದು ಜನಾಂಗದ ವ್ಯಕ್ತಿಯಲ್ಲ; ಎಲ್ಲ ಜನಾಂಗದ ಬಂಧು. ನಡೆ-ನುಡಿ ಕಲಿಸಿದ ಆದರ್ಶ ವ್ಯಕ್ತಿ ಎಂದರು.

ನೆಲಮಂಗಲ ಪವಾಡದ ಬಸವಣ್ಣದೇವರ ಮಠದ ಶ್ರೀ ಶ್ರೀ ಸದಾಶಿವ ಸ್ವಾಮಿಗಳವರು ಹಲವು ಹನ್ನೊಂದು ಚಿಂತನೆಯಲ್ಲಿ ನಾವಿದ್ದೇವೆ; ಸತ್ಯಶುದ್ಧ ಜೀವನ ನಮ್ಮದಾಗಿಲ್ಲ. ಬಸವ ಜಯಂತಿಯ ಆಚರಣೆಯಿಂದಾದರೂ ನಮ್ಮ ನಡೆನುಡಿಗಳು ಆ ದಾರಿಯಲ್ಲಿ ಸಾಗಬೇಕು—ಎಂದರು.

ಬಸವಜಯಂತಿ ಆಚರಣೆ ಆಡಂಬರಕ್ಕಲ್ಲ, ಬೂಟಾಟಿಕೆಗಲ್ಲ, ಯಾರ ಯಾವುದೇ ಸ್ವಾರ್ಥದ ಪ್ರಚಾರಕ್ಕಲ್ಲ. ಬಸವಣ್ಣನ ಪರಿಚಯ ಇಂದಿನ ಯುವ ಜನಾಂಗಕ್ಕೆ ಸ್ಪಷ್ಟವಾಗಿ ಆಗಬೇಕು, ಅವರ ಅರಿವಿಗೆ ಆ ಪುಣ್ಯ ಪುರುಷನ ಸಂದೇಶಗಳು ಬರಬೇಕು. ಧಿಕ್ಕೆಟ್ಟಿರುವ ಸಮಾಜಕ್ಕೆ, ಅಭಿಮಾನ ಕಳೆದುಕೊಳ್ಳುತ್ತಿರುವ ವಿದ್ಯಾವಂತರೆಂದು ಕೊಂಡಿರುವ ಯುವಕರಿಗೆ ಇತಿಹಾಸ ನೆನಪು ಮಾಡಿಕೊಡುವುದರ ಮೂಲಕ ಕ್ರಿಯಾಶೀಲರನ್ನಾಗಿಸುವುದಕ್ಕೆ ಜಯಂತಿ ಎನ್ನುತ್ತ ಶ್ರೀ ಹೆಚ್. ವಿ. ವೀರಭದ್ರಯ್ಯನವರು ಆಚರಣೆಯ ಉದ್ದೇಶವನ್ನು ಸ್ಪಷ್ಟಪಡಿಸುತ್ತಾ ಜನಪದ ಕವಿಗಳು ಕಂಡ ಬಸವಣ್ಣನವರ ಜೀವನ ಚಿತ್ರವನ್ನು ಬಿಡಿಸಿದರು.

ಎರಡೂ ಅಧಿವೇಶನಗಳ ಅಧ್ಯಕ್ಷತೆ ವಹಿಸಿದ್ದ ಪರಮಪೂಜ್ಯ ಶ್ರೀ ಶ್ರೀಗಳವರು ಗ್ರಾಮಾಂತರ ಬಸವಜಯಂತಿಯ ಉದ್ದೇಶವನ್ನು ತುಂಬುಗಂಭೀರವಾಗಿ ವಿಶದಪಡಿಸುತ್ತಾ ಗ್ರಾಮೀಣ ಬಂಧು-ಭಗಿನಿಯರು ಮಹಾತ್ಮ ಬಸವಣ್ಣನವರ ಜೀವನ ಚರಿತ್ರೆಯಿಂದ ಶರಣರ ಜೀವನ ವಿಚಾರಗಳಿಂದ ವಂಚಿತರಾಗಬಾರದು; ಅವರ ನಿಸ್ವಾರ್ಥ ದುಡಿಮೆಗೆ ಪ್ರತೀಯಾಗಿ ಕಲಿತವರು, ಮಹಾಪುರುಷರು ಕಂಡ ಬೆಳಕಿನ ಪರಿಚಯ ಮಾ ಡಿ ಕೊ ಡು ವ ತ್ಯಾಗ ಬುದ್ಧಿಯವರಾಗಬೇಕು. ಬಸವಣ್ಣ ಹೋರಾಟ ಮಾಡಿದ್ದೇ ದೀನರಿಗಾಗಿ, ದಲಿತರಿಗಾಗಿ, ಮಹಿಳೆಯರ ಉದ್ಧಾರಕ್ಕಾಗಿ—ಎಂದು ನುಡಿದರು. ಮುಂದುವರಿದು –ಧರ್ಮ ಒಣ ವೇದಾಂತವಲ್ಲ, ಜೀವನವನ್ನು ಅರ್ಥಪೂರ್ಣವಾಗಿಸಲು ಒಂದು ದಿವ್ಯ ಮಾಧ್ಯಮ. ಶರಣರು ಜೀವನವನ್ನು ನಿರಾಕರಿಸಿದವರಲ್ಲ; ಜೀವನ ಸೌಂದರ್ಯವನ್ನು ಕಂಡುಕೊಂಡವರು. ಅವರು ಕಂಡುಂಡ ಆ ಸೌಂದರ್ಯ ಶ್ರೀಮಂತಿಕೆಯನ್ನು "ಶಿವಬೇಕಾ"ಗಿ ಚೆಲ್ಲಿದರು -ಸಮಸ್ತ ಮಾನವ ಕುಲಕ್ಕೆ. ಅದರ ನೇತಾರರಾದವರು ಬಸವಣ್ಣ. ರಾಷ್ಟ್ರಕವಿ ಕುವೆಂಪುರವರಿಂದು ಬಸವಣ್ಣನನ್ನು ಮೆಚ್ಚಿ ನುಡಿದಿದ್ದಾರೆ. ವಿಚಾರವಂತರು ಚಿಂತನ ಮಂಥನ ಮಾಡಬೇಕು. ಅವರ ಮಾತುಗಳನ್ನೂ ಬಸವಣ್ಣ ವಿಶ್ವದ ಒಂದು



ಅದ್ಭುತ ವಿಸ್ಮಯ. ಯೋಚಿಸಿದಷ್ಟೂ, ಪರಿಭಾವಿಸಿದಷ್ಟೂ, ಎತ್ತರದ ವ್ಯಕ್ತಿತ್ವ ಭಗವಾನ್ ಬಸವಣ್ಣನವರದು—ಎಂದು ಆಶೀರ್ವಚನ ಮಾಡಿದರು.

ವ್ಯವಸ್ಥಾಪಕ ಬಂಧು ಶ್ರೀ ಶ್ರೀಗಳವರಿಗೆ ಅರ್ಪಿಸಿದ ಮಲ್ಲಿಗೆಯ ಹಾರ ಸಭಿಕರ ಗಮನ ಸೆಳೆಯಿತು; ಅದು ಅವರ ಭಕ್ತಿಯ ಕುರುಹು.

ಜಗಜ್ಯೋತಿ ಬಸವೇಶ್ವರ ನಾಟಕ ಶ್ರೀ ಕ್ಷೇತ್ರದವರಿಂದ ಅಭಿನಯಿಸಲ್ಪಟ್ಟಿತು. ನಗರದವರಿಗೊಂದು ಸೋಜಿಗ. ಚಲನಚಿತ್ರದಲ್ಲಿ ಬರುವ ದೃಶ್ಯಗಳಂತೆಯೇ ನಾಟಕದ ದೃಶ್ಯಗಳನ್ನು ಕಂಡಾಗ ಬೇಗ ಹೋಗುವ ಯೋಚನೆಯಲ್ಲಿ ಬಂದವರಿಗೆ ಪೂರ್ಣ ನೋಡಿಯೇ ಹೋಗಬೇಕೆಂಬ ಆಸೆ. ಕನಕಪುರದ ರಸ್ತೆ ಬದಿಯ ಬಯಲಿನ ಭಾಗ್ಯ—ಇಪ್ಪತ್ತೈದು ಸಾವಿರ ಜನರ ಪಾದಸ್ಪರ್ಶದಿಂದ ಪುಲಕಿತ !

"ನಾಟಕ ಹಿಂಗೈತೆ ಅಂತ ಗೊತ್ತಿರಲಿಲ್ಲಪ್ಪ, ಆ ಹುಡ್ಗೀರು ಯಾವೂರ್ನರಂತೆ" –ಕೇಳಿಸಿದ ಮಾತು. "ಮಂಕೇ, ಹುಡ್ಗೀರಲ್ಲ ಕಣೋ ಅವರು ಮಠದಾಗೆ ಓದೋ ಹುಡುಗರಂತೆ" -ಇನ್ನೊಬ್ಬ ತಿದ್ದುತ್ತಿದ್ದ.

"ಸಿದ್ಧಗಂಗೆ ಸ್ವಾಮಿಗಳಿಗೆ ಆಯಾಸವೇ ಇಲ್ಲೇನೋ ಬೆಳ್ಳಂಬೆಳಗಾಕುವ ತನಕ ಕುಂತೇ ಇರುತಾರಲ್ಲೋ ನಾಟಕದ್ ಮುಂದೆ" -ಮಾತು ಬದಲಾಯಿಸಿತು ದಿಕ್ಕನ್ನು. "ನಮ್ ಕಣ್ಮುಂದೆ ನಡೆಯೋ ಬಸವಣ್ಣ ಆ ನಮ್ಮಪ್ಪ ಕಣೋ"–ಭಕ್ತಿ ನುಡಿಯಾಡಿದ ಜೋತೆಗಾರ.

ಸ್ವಾಮೀಜಿಯವರ ಕಾರು ಚಲಿಸಿತು; ನಾಟಕ ನೋಡಿ ಹಿಂದಿರುಗುತ್ತಿದ್ದ ಜನ ಜಾತ್ರೆ ಮೂರು ಮೈಲಿವರೆಗೆ ಸಾಗಿತ್ತು. ಮೂಡಣ ದಿಕ್ಕಿನಲ್ಲಿ ಅರುಣೋದಯವಾಗುತ್ತಿತ್ತು.

(10ನೇ ಪುಟದಿಂದ) 

ತೋರಿ ಸಂಘಟಿತರಾಗದ ಹೊರತು ಯಾವ ಸಮಾಜಕ್ಕೂ ಮೋಕ್ಷವಿಲ್ಲ. ಇದ ಜೊತೆಗೆ ನಮ್ಮ ಬೌದ್ಧಿಕ ಆಲಸ್ಯ ಬೇರೆ. ಬುದ್ಧಿಯನ್ನು ಉಪಯೋಗಿಸಿದರೆ ಅದೆಲ್ಲ ಖರ್ಚಾಗಿ ಬಿಡುವುದೋ ಎಂಬ ಹೆದರಿಕೆಯಿರಬಹುದು. ಸಣ್ಣ ಹುಡುಗನಿಗೂ ಬೀದಿಯಲ್ಲಿ ಸಿಕ್ಕುವ ಐದು ಪೈಸೆಯ ನೋಟ್ಸ್ ಬೇಕು. ಪಠ್ಯಪುಸ್ತಕ ಓದದಿದ್ದರೂ ಚಿಂತೆ ಇಲ್ಲ, ನೋಟ್ಸ್ ಉರುಹೊಡೆದು ಹೇಗೋ ಪರೀಕ್ಷೆ ಪಾಸಾದರೆ ಸಾಕು. ಇತರ ರಾಷ್ಟ್ರಗಳೊಂದಿಗೆ ನಾವು ತಲೆಯೆತ್ತಿ ನಿಲ್ಲಬೇಕಾದರೆ ಜ್ಞಾನ ಪಿಪಾಸೆ ಬೆಳಸಬೇಕು. ಆಲೋಚನಶಕ್ತಿ ಬೆಳೆಸಬೇಕು, ಇಲ್ಲದಿದ್ದರೆ ಗೊತ್ತೇ ಇದೆ–ಪರಾವಲಂಬನೆ ದಾಸ್ಯ, ಸಮಾಜದ ಬಹುಮಂದಿ ವಿದ್ಯಾವಂತರಿಗೆ ಧರ್ಮದಬಗ್ಗೆ ಶ್ರದ್ಧೆ ಇಲ್ಲ, ನಿಷ್ಠೆ ಇಲ್ಲ ಧರ್ಮವನ್ನು ಅವಹೇಳನ ಮಾಡುವುದು ಒಂದು ಫ್ಯಾಷನ್ ಎಂದು ತಿಳಿದಿರುವಂತಿದೆ. ಇದಕ್ಕಾಗಿ ಅವರನ್ನು ಬೈದು ಪ್ರಯೋಜನವಿಲ್ಲ. ಏಕೆಂದರೆ ನಮ್ಮ ಧರ್ಮದ ಸಂಸ್ಕೃತಿಯ ಆಚಾರಗಳ ಬಗ್ಗೆ ಮನೆಯಲ್ಲಾಗಲಿ ಶಾಲಾಕಾಲೇಜುಗಳಲ್ಲಾಗಲಿ, ಯಾವ ರೀತಿಯ ಶಿಕ್ಷಣವೂ ದೊರಕುತ್ತಿಲ್ಲ. ಇದರ ಫಲವಾಗಿ ನಮ್ಮ ಮಕ್ಕಳು ನಮ್ಮ ದೇಶದ, ಧರ್ಮದ ಮತ್ತು ಸಂಸ್ಕೃತಿಯ ಶತ್ರುಗಳ ಬಾಯಿಗೆ ತುತ್ತಾಗುತ್ತಿದ್ದಾರೆ. ತಂದೆ-ತಾಯಿಯರೂ ಉಪಾಧ್ಯಾಯರೂ ಇಲ್ಲಿ ಎಚ್ಚರವಹಿಸುವುದು ಆದ್ಯ ಕರ್ತವ್ಯ. ಅನರ್ಥಕರವಾದ ಕುತ್ಸಿತ ಕಲ್ಪನೆ ದೂರವಾಗಬೇಕು, ಜೀವನದಲ್ಲಿ ಹಳಸಲು ಮಾಸಲುಗಳು ಇಲ್ಲದೆ, ಹೊಸ ಕಾಂತಿ, ಹೊಸ ಸಂಭ್ರಮಗಳು ಕಾಣುತ್ತಿರಬೇಕು. "ದೈವಂ ಹಿ ದೈವಮಿತಿ ಕಾಪುರುಷಾವದಂತಿ"–ಇದೆಲ್ಲ ದೈವೇಚ್ಛೆ, ವಿಧಿಲೀಲೆ, ಹಣೆಯಬರಹ ಎಂದು ಗೊಣಗಾಡಿ ಚರ್ಚೆ ಮುಗಿಸಕೂಡದು. ಇದು ಸಾಮಾಜಿಕ ದುರವಸ್ಥೆಗೆ ಮೂಲ ಕಾರಣ ಸಾಮಾಜಿಕ ಸಮಸ್ಯೆ ನಿವಾರಣೆಗಾಗಿ ದೃಢವಾದ ಮನಸ್ಸಿನ ಶಕ್ತಿ, ಚೈತನ್ಯದ ಪ್ರವಾಹವಾಗಬೇಕು. ತಮ್ಮ ವೈಯಕ್ತಿಕ ಜೀವನದಲ್ಲಿ ಸರಳತೆ ಪರಿಶುದ್ಧತೆಗಳನ್ನು ಮರೆಯದೆ ಆಧ್ಯಾತ್ಮಿಕ ತತ್ವಗಳನ್ನು ಅರಗಿಸಿಕೊಂಡು ಅನುಷ್ಠಾನಕ್ಕೆ ತರಬೇಕು. ಯಾವ ಜಾತಿ ಮತದವರೇ ಆಗಲಿ, ಅವರಲ್ಲಿ ಹೆಚ್ಚು ವಿದ್ಯಾವಂತರೂ ಸುಸಂಸ್ಕೃತರೂ ಆದವರು ತಮ್ಮವರನ್ನು ಮೇಲೆತ್ತುವದಕ್ಕೆ ಮತ್ತು ಇತರರೊಡನೆ ಸೌಹಾರ್ದವನ್ನು ಬೆಳಸುವದಕ್ಕೆ ಶ್ರಮಿಸಬೇಕು. ಕಿಂಚಿತ್ ಇಷ್ಟಾದರೂ ಆದಾಗಲೇ "ಉದಾರ ಚಿಂತನಾಂತು ವಸುಧೈವ ಕುಟುಂಬಕಂ" ಎಂಬ ಮಾತು ಸಾರ್ಥಕವಾದೀತು. ಸಮಾಜದ ಸಮಸ್ಯೆಗಳಲ್ಲಿ ಕೊಂಚ ಸುಧಾರಿಸಿಕೊಂಡೇವು.

(ದಿನಾಂಕ 22-8-83 ರ ಬೆಂಗಳೂರು ಆಕಾಶವಾಣಿ ಕೃಪೆಯಿಂದ ಪ್ರಸಾರವಾದುದು)



# ಶ್ರೀ ಕ್ಷೇತ್ರದ ಹಳೆಯ ವಿದ್ಯಾರ್ಥಿ ಬಂಧುಗಳಲ್ಲಿ

ಒಂದು ವಿನಮ್ರ ಮನವಿ. ಹಳೆಯ ವಿದ್ಯಾರ್ಥಿ ಸಂಘದ ಸದಸ್ಯರಾದ ತಮ್ಮ ಗಮನಕ್ಕೆ ಈ ಸಂತೋಷದ ಸುದ್ದಿ. ತಾವು ಶ್ರೀ ಕ್ಷೇತ್ರದ, ಹಾಗೂ ಸಂಘದ ಅಮೂಲ್ಯ ಸಂಪತ್ತು. ಶ್ರೀ ಶ್ರೀಗಳವರು ಅನುಗ್ರಹಪೂರ್ವಕವಾಗಿ ರೂಪಿಸಿದ ಹಿರಿಯರಾಗಿದ್ದೀರಿ. ತಾವು ಸಂಘದ ಕಾರ್ಯಚಟುವಟಿಕೆಗಳಲ್ಲಿ ಸಕ್ರಿಯವಾಗಿ ಭಾಗಿಗಳಾಗುತ್ತಿರುವುದಂತೂ, ಕೃತಜ್ಞತಾ ಪೂರ್ವಕವಾಗಿ ಸ್ಮರಿಸಬೇಕಾದ ವಿಚಾರ. ತಮ್ಮ ಸಲುವಾಗಿಯೇ ಸಂಘ ಈಗ "ಆಜೀವ ಸದಸ್ಯತ್ವ" ದ ಮುಕ್ತಾವಕಾಶವನ್ನು ನೀಡಿ ಸ್ವಾಗತಿಸುತ್ತಿದೆ. ಕೇವಲ ಒಂದುನೂರಾ ಒಂದು ರೂಪಾಯಿಗಳನ್ನು ನೀಡಿ ಆಜೀವ ಸದಸ್ಯರಾಗಿ ಸಂಘವನ್ನು ವೃದ್ಧಿಗೊಳಿಸಬೇಕೆಂದು ಪ್ರಾರ್ಥನೆ. ಅಲ್ಲದೆ, ತಮಗೆ ಗೊತ್ತಿರುವ ಶ್ರೀ ಕ್ಷೇತ್ರದ ಹಳೆಯ ವಿದ್ಯಾರ್ಥಿಗಳನ್ನು ಆಜೀವ ಸದಸ್ಯರನ್ನಾಗಿ ಸಂಘಕ್ಕೆ ನೊಂದಾಯಿಸಬೇಕೆಂದು ವಿನಂತಿ.

**ಈಗಾಗಲೇ ಹಳೆಯ ವಿದ್ಯಾರ್ಥಿ ಸಂಘದ ಶಾಶ್ವತ ಸದಸ್ಯತ್ವ ಪಡೆದಿರುವ ವಿಳಾಸಗಳು**

[ಡಿಶಂಬರ್ 83 ಸಂಚಿಕೆಯಿಂದ]

ಸರ್ವಶ್ರೀ....

11 ಎಂ. ಎಸ್. ಗುರುಸಿದ್ದಯ್ಯ C/o ಕೆ. ಎಸ್. ಸದಾಶಿವಯ್ಯ, ಪ್ರೌಢಶಾಲಾ ಉಪಾಧ್ಯಾಯರು, ಶಾಂತಿನಗರ, ತುಮಕೂರು.

12 ಹೆಚ್. ರಾಜು, ನಂ. 6, ಕಟ್ಟಡಗಳ ಉಪ ವಿಭಾಗ, ಅಂಬೇಡ್ಕರ್ ಬೀದಿ, ಬೆಂಗಳೂರು-1.

13 ಬಿ. ಎಸ್. ವಿರುಪಾಕ್ಷಪ್ಪ, B.A.B.L., ನ್ಯಾಯಮೂರ್ತಿಗಳು, R.No. 13, ಪರಕಾಲ ಮಠದ ಕಟ್ಟಡ, ಟ್ಯಾಂಕ್ ಬಂಡ್ ರಸ್ತೆ, ಬೆಂಗಳೂರು-560009.

14 ಹೆಚ್. ಸಿ. ನಂಜುಂಡಯ್ಯ, ಕಾಂಪೌಂಡರ್, ಬಡಿಗುಂಡ ಮೈನ್ಸ್, ಡಿಸ್‌ಪೆನ್ಸರಿ, ಭದ್ರಾವತಿ.

15 ಶ್ರೀ ಶ್ರೀ ಚನ್ನವೀರ ದೇಶಿಕೇಂದ್ರ ಸ್ವಾಮಿಗಳು, ದೊಡ್ಡ ಮಠ, ಅಕ್ಕಿಪೇಟೆ, ಬೆಂಗಳೂರು-560053.

16 ಎಂ. ನಂಜುಂಡಪ್ಪ, ಸಹೋಪಾಧ್ಯಾಯರು, ಸರ್ಕಾರಿ ಹಿರಿಯ ಪ್ರಾಥಮಿಕ ಶಾಲೆ, ಕುರುಡಿ ಮತ್ತು ಅಂಚೆ, ಗೌರಿಬಿದನೂರು ತಾಲ್ಲೂಕ್.

17 ರೇಣುಕಯ್ಯ, ಉಪಾಧ್ಯಾಯರು, ಶಾಕಲದೇವನ ಪುರ ಮತ್ತು ಅಂಚೆ, ದೊಡ್ಡಬಳ್ಳಾಪುರ ತಾಲ್ಲೂಕು.

18 ಟಿ. ಚನ್ನಬಸವಯ್ಯ, ಉಪಾಧ್ಯಾಯರು, ತಾಲಗೊಂಡ ಮತ್ತು ಅಂಚೆ, ಶಿರಾ ತಾಲ್ಲೂಕು.

19 ಎಂ. ಎಲ್. ನಂಜುಂಡಪ್ಪ, 2ನೇ ದರ್ಜೆ ಕರಣಿಕರು, ಲೋಕೋಪಯೋಗಿ ಕಛೇರಿ, ಕುಣಿಗಲ್ಲು, ತುಮಕೂರು ಜಿಲ್ಲೆ.

20 ಸೋಮಶೇಖರಯ್ಯ, ವೀಲ್ ಮತ್ತು ಪಿನಿಯನ್ ವಿಭಾಗ, H.M.T. ಗಡಿಯಾರ ಕಾರ್ಖಾನೆ ನಂ. 4, ತುಮಕೂರು.

21 ಎಂ. ಎಸ್. ನಂಜುಂಡಪ್ಪ, ಉಪಾಧ್ಯಾಯರು, ಮಾರಶೆಟ್ಟಿಹಳ್ಳಿ ಮತ್ತು ಅಂಚೆ, ಗುಬ್ಬಿ ತಾಲ್ಲೂಕು, Pin. 562123.

22 ಕೆ. ಬಿ. ಸಿದ್ದಲಿಂಗಯ್ಯ, B.Sc., S/o ಬಸಪ್ಪ, ಹಳೇಪೇಟೆ, ಮಹಂತಿನ ಮಠದ ಹತ್ತಿರ, ನೆಲಮಂಗಲ-562123.

23 ಬಿ. ಸೋಮಶೇಖರ, ಸಹಾಯಕ, K.E.B., ಹನೂರ್, ಕೊಳ್ಳೆಗಾಲ ತಾ||

24 ಜಿ. ಸಿದ್ದಸಂಜಶೆಟ್ಟಿ, BSc.,LLB , ವರಮಾನ ತೆರಿಗೆ ಇಲಾಖೆ, ನಂ. 31, ಟ್ಯಾಂಕ್ ಬಂಡ್ ರಸ್ತೆ, ಚಾಮರಾಜಪೇಟೆ, ಬೆಂಗಳೂರು-560018.

25 ವಿದ್ವಾನ್ ಕೆ. ಎಂ. ರೇವಣಸಿದ್ದಯ್ಯ, M.A., ಪ್ರಾಂಶುಪಾಲರು, J.S.S. ಕಾಲೇಜು, ರಾಮಾನುಜಮ್ ರಸ್ತೆ, ಮೈಸೂರು. (ಮುಂದುವರೆಯುವುದು)

LICENCED TO POSTWITHOUT PRE PAYMENT LICENCE NO. 3
SIDDAGANGA MONTHLY Reg. No. KRN Q-9



ಶ್ರೀ ಸಿದ್ಧಲಿಂಗೇಶ್ವರ ಸ್ವಾಮಿ ಮುದ್ರಣಾಲಯ, ಶ್ರೀ ಸಿದ್ಧಗಂಗಾ ಮಠ.